# ವಾನಸಿ

ಆಗಸ್ಟ್ 2002

ತಿಂಗಳ ಪತ್ರಿಕೆ

- ಪ್ರಾಚೀನ ಭಾರತದಲ್ಲಿ ಮಹಿಳೆಯರು
- ಸ್ವಾತಂತ್ರ್ಯ ಹೋರಾಟದಲ್ಲೊಂದು ಬೆಳ್ಳಿ ಚುಕ್ಕೆ
- ರೇಷ್ಮೆಯ ಗುಡಾರ
- ಯಜಮಾನ - ಯಜಮಾನಿಕೆ
- ಕೋಮುವಾದಿ ರಾಜಕಾರಣಕ್ಕೆ ಹಿಂಸೆಯೇ ಆಹಾರ

# ಮಾನಸ

ತಿಂಗಳ ಪತ್ರಿಕೆ ಆಗಸ್ಟ್ 2002

*ಸಂಪುಟ - 17* *ಸಂಚಿಕೆ - 7*





ವಿಳಾಸ
"ಮಾನಸ" ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067
ಇ-ಮೈಲ್ : manasapathrike@yahoo.co.in



ಸೂಚನೆ: ಬಿಡಿ ಪ್ರತಿ 5-00 ರೂ.
ವಾರ್ಷಿಕ ಚಂದಾ 50-00 ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


## *ಈ ಸಂಚಿಕೆಯಲ್ಲಿ.........*






ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ ಪಂಚಾಯಿತಿ ರಸ್ತೆ,
*ಕಾಡುಗೋಡಿ - ಅಂಚೆ, ಬೆಂಗಳೂರು - 560 067*

# ಸಂಪಾದಕೀಯ



ರೂಪ ಕನ್ವರ್, ಕುಟ್ಟೂ ಬಾಯಿ, ಖಯಾಲ್ ಬಾಯಿ ಮೀನ.... 'ಸತಿ ಪದ್ಧತಿ' ಇತಿಹಾಸಕ್ಕೆ ಸೇರಿದೆ ಎನ್ನುವ ಮೊದಲೇ, ಗತ ಕಾಲದ ನೆನಪುಗಳು ನಮ್ಮನ್ನು ದಿಗಿಲು ಪಡಿಸುವ ರೀತಿಯಲ್ಲಿ ನಮ್ಮ ದುರಿಗೇ ಭಸ್ಮವಾಗಿರುವುದು ವಿಡಂಬನಾತ್ಮಕವಾಗಿದೆ. ರಾಜಸ್ತಾನದ ಖಯಾಲ್ ಬಾಯಿ ಮೀನಳ 'ಸತಿ ಸಹಗಮನ' ವನ್ನು ಪೊಲೀಸರು ತಪ್ಪಿಸಿರುವುದು ಸ್ತುತ್ಯಾರ್ಹ. ಮೂಲಭೂತವಾದಿಗಳು ಹಿಂದುತ್ವ ವನ್ನು ಪುನರುಜ್ಜೀವನಗೊಳಿಸುವ ಹಿನ್ನಲೆಯಲ್ಲಿ ಸತಿಯಂತಹ ಭಯಾನಕ ಕೃತ್ಯಗಳಿಗೆ ಪ್ರೋತ್ಸಾಹಿಸುತ್ತಿರುವುದು, ಒತ್ತಾಯಿಸುತ್ತಿರುವುದು ನಮ್ಮ ನಾಡಿನ ದೊಡ್ಡ ದುರಂತವಾಗಿದೆ.

ಸಂಸ್ಕೃತಿಯ ಹೆಸರಿನಲ್ಲಿ, ಸಂಪ್ರದಾಯ ಪುನರುಜ್ಜೀವನಗೊಳಿಸುವ ಹೆಸರಿನಲ್ಲಿ ಗಂಡನ ಚಿತೆಯೇರಿದ ರೂಪ ಕನ್ವರ್, ಕುಟ್ಟೂ ಬಾಯಿ ಮಹಿಳೆಯರಿಗೆ ನೀಡುವ ಸಂದೇಶಗಳಾದರೂ ಏನು? ಮಹಿಳೆಯರು ಅದರಲ್ಲೂ ವಿಧವೆಯರ ಅಸಹಾಯಕತೆ, ಹಿಂಸೆಯ ಬಲಿಪಶುಗಳಾಗುವ ಹೆದರಿಕೆ, ಆರ್ಥಿಕ ದೌರ್ಬಲ್ಯ, ಸಾಮಾಜಿಕ ನಿಂದನೆ, ಇವೆಲ್ಲವೂ ಇಲ್ಲಿ ಅಭಿವ್ಯಕ್ತಿಗೊಳ್ಳುವುದನ್ನು ನಾವು ಕಾಣಬಹುದಾಗಿದೆ. ಇವರು ಚಿತೆಯೇರುವಾಗ, ಸುಟ್ಟು ಕರಕಲಾಗುವಾಗ ಸುತ್ತ ನಿಂತಿದ್ದ ಜನರು ಮೂಕರಾಗಿ, ಇಲ್ಲವೇ ಘೋಷಣೆಗಳೊಂದಿಗೆ ಇಡಿಯ ಘಟನೆಗೆ ಸಾಕ್ಷೀಭೂತರಾಗಿ ನಿಂತು ನೋಡುತ್ತಿದ್ದರು ಎಂಬುದು ಆತಂಕಕಾರಿಯಾದ ವಿಚಾರವಾಗಿದೆ. ಪಿತೃಪ್ರಧಾನ ಮೌಲ್ಯಗಳು ನಿರ್ಲಕ್ಷ್ಯಗೊಳ್ಳುತ್ತಿರುವ ಇಂದಿನ ಸಂದರ್ಭದಲ್ಲಿ ಅವುಗಳನ್ನು ವಿಜೃಂಭಿಸಿ ಹೇಳುವಂತಹ ಪ್ರಯತ್ನಗಳು 'ಸತಿ ಪದ್ಧತಿ' ಯಂತಹ ಅಮಾನುಷ ಕ್ರಿಯೆಗಳನ್ನು ಪುನರುಜ್ಜೀವನಗೊಳಿಸುತ್ತಿವೆ ಎಂಬುದು ಮಹಿಳೆಯರಿಗೆ ಅರಿವಾಗಬೇಕಿದೆ.

ರೂಪ ಕನ್ವರ್ ಚಿತೆಯೇರಿದ ಸ್ಥಳದಲ್ಲಿ ಮಂದಿರ ನಿರ್ಮಿಸುವ ಘಟನೆಯ ವರ್ಷಾಚರಣೆ ಮಾಡುವ ಪ್ರಯತ್ನಗಳು ನಡೆಯುತ್ತಿವೆ ಎನ್ನುವುದು ಆಘಾತಕರವಾದ ವಿಚಾರಗಳಾಗಿವೆ. ಇಂತಹ ಬರ್ಬರ ಕೃತ್ಯಗಳು ನಡೆಯದಿರುವಂತೆ ತಡೆಗಟ್ಟುವುದು ಸರ್ಕಾರದ ಜವಾಬ್ದಾರಿಯಾಗಿದೆ. ಜೊತೆಗೆ ಇಂದಿನ ಹಿಂದುತ್ವವಾದಿಗಳು ಪ್ರಚೋದನೆ ನೀಡಿರುವ ಇಂತಹ ಸಂಸ್ಕೃತಿಯ ವಿರುದ್ಧ ಹೋರಾಡುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆ. ಮಂದಿರಗಳಿಗಾಗಲೀ, ಆಚರಣೆಗಾಗಲೀ ಅವಕಾಶ ಕೊಡದೇ ಕಠಿಣವಾದ ಕಾನೂನು ಕ್ರಮಗಳನ್ನು ಗ್ರಾಮಸ್ತರ ವಿರುದ್ಧ, ಸಂಬಂಧಪಟ್ಟವರ ವಿರುದ್ಧ ಸರ್ಕಾರ ತೆಗೆದುಕೊಳ್ಳಬೇಕು. ಈ ಬಗ್ಗೆ ಮಹಿಳೆಯರು ಎಚ್ಚರಗೊಂಡು ಇಂತಹ ಅಮಾನುಷ ಕೃತ್ಯ ನಡೆಯದಂತೆ ಜಾಗೃತಿ ವಹಿಸಬೇಕಾಗಿದೆ

- ಸಂಪಾದಕ ಮಂಡಳಿ

# ಪ್ರಾಚೀನ ಭಾರತದಲ್ಲಿ ಮಹಿಳೆಯರು - ಭಾಗ 2

## ಮಹಿಳೆಯರ ವಿರುದ್ಧದ ಹಿಂಸೆ

- ಮಹಿಳೆಯರ ಮೇಲಿನ ಹಿಂಸೆಯ ಪ್ರಶ್ನೆಯನ್ನು ಅನೇಕ ಕೋನಗಳಿಂದ ಪರಿಶೋಧಿಸಲು ಸಾಧ್ಯವಿದೆ.
- ಹಿಂಸಾತ್ಮಕ ಘಟನೆಗಳಿಗೆ ಅತ್ಯಂತ ನಿಚ್ಚಳವಾದ ಪುರಾವೆ ಮತ್ತು ನಿಜವಾದ ಆಧಾರಗಳಿಗಾಗಿ ಪ್ರಯತ್ನಿಸಲು ನಮಗೆ ಸಾಧ್ಯವಿದೆ.
- ಹಿಂಸೆಯನ್ನು ಹೇಗೆ ನೋಡಲಾಗಿದೆ ಅಂದರೆ ಅತ್ಯಾಚಾರದಂಥ ಅಪರಾಧಕ್ಕೆ ಶಿಕ್ಷೆಗಳನ್ನು ವಿಧಿಸಲಾಗಿದೆಯೇ ಎಂದು ತಿಳಿಯಲು ನಿಯಾಮಕ ಸಾಹಿತ್ಯವನ್ನು ಪರಿಶೀಲಿಸಲು ಸಾಧ್ಯ.
- ಮಹಿಳೆಯರ ಮೇಲಿನ ಹಿಂಸೆಗೆ ಅನುಕೂಲಕರವಾದ ವಾತಾವರಣವನ್ನು ಪ್ರತಿನಿಧಿಸುತ್ತವೆ ಎಂದು ನಾವು ವಾದಿಸಬಹುದಾದ ಮಹಿಳೆಯರ ಬಗೆಗಿನ ಧೋರಣೆಗಳನ್ನು ಅನಾವರಣಗೊಳಿಸಲು ಪ್ರಯತ್ನಿಸಬಹುದಾಗಿದೆ.
- ಮಹಿಳೆಯರ ಮೇಲಾಗುವ ಹಿಂಸೆಯು ''ಸಾಮಾನ್ಯ'' ಅಥವಾ ''ಕಾನೂನು ಬದ್ಧ'' ಎಂದು ತಿಳಿಯಬಹುದಾದ ಪರಿಸ್ಥಿತಿಗಳು ಯಾವುದಾಗಿದ್ದವು ಎಂದು ತಿಳಿಯಲು ಪ್ರಯತ್ನಿಸಬಹುದು. ನಾವು ಮುಂದೆ ಕಾಣುವಂತೆ, ಈ ಪ್ರಶ್ನೆಗಳು ಪದೇ ಪದೇ ಎದುರಾಗುವ ಕ್ಷೇತ್ರಗಳು ಇವೆ.

ನಾವು ಕಡೆಯ ಅಂಶದಿಂದ ಆರಂಭಿಸಿ ಉಳಿದ ಮೂರು ಅಂಶಗಳು ಅದಕ್ಕೆ ಹೇಗೆ ಸಂಬಂಧಿಸಿವೆ ಎನ್ನುವುದನ್ನು ನೋಡೋಣ.

## ಕುಟುಂಬದಲ್ಲಿ ಹಿಂಸೆ :

ನೀವು ಬೃಹದಾರಣ್ಯಕ ಉಪನಿಷತ್ತಿನ ಬಗ್ಗೆ ಕೇಳಿರಬಹುದು (ಕ್ರಿ.ಪೂ. 6ನೇ ಮತ್ತು 5ನೇ ಶತಮಾನಗಳಲ್ಲಿ ರಚಿತವಾಯಿತು). ಆಧ್ಯಾತ್ಮಿಕ ಚಿಂತನೆಗೆ ಅತ್ಯಂತ ಪ್ರಾಚೀನಕಾಲದ ಉದಾಹರಣೆಯೆಂದರೆ ಇದು ಎಂದು ವ್ಯಾಪಕವಾಗಿ ಉದ್ಘೋಷಿಸಲಾಗಿದೆ. ಇತರ ವಿಷಯಗಳೊಂದಿಗೆ, ಪುರುಷನೊಬ್ಬ ತನ್ನ ಹೆಂಡತಿಯೊಂದಿಗೆ ಲೈಂಗಿಕ ಸಂಬಂಧಗಳನ್ನು ಗಟ್ಟಿಗೊಳಿಸಿಕೊಳ್ಳುವ ವಿಧಾನಗಳು ಮತ್ತು ಸಾಧನಗಳನ್ನು ಕುರಿತು ಚರ್ಚಿಸುವ ಅಧ್ಯಾಯವೊಂದು ಇದರಲ್ಲಿದೆ. (ಬೃ.ಉ.: 6,7,7). ಇಲ್ಲಿ ಪುರುಷನು ಮಹಿಳೆಯ ಮನವೊಲಿಸಬೇಕು; ಒಂದು ವೇಳೆ ಅವಳು ಒಪ್ಪದಿದ್ದಲ್ಲಿ ಮಂತ್ರಗಳನ್ನು ಬಳಸುವ ಮೂಲಕ ಪ್ರಚೋದಿಸಬೇಕು. ಇದೂ ಯಶಸ್ವಿಯಾಗದಿದ್ದಲ್ಲಿ ಅವಳನ್ನು ಹೊಂದುವ ಪ್ರಯತ್ನ ಮಾಡಬಹುದು. ಆಗ ತನ್ನ ನಿರೀಕ್ಷೆಯಂತೆ ನಡೆದುಕೊಳ್ಳದಿದ್ದಲ್ಲಿ ಅವಳನ್ನು ಕೋಲು ಅಥವಾ ಕೈಯಿಂದ ಹೊಡೆಯಬಹುದು. ಹಾಗೆ ಹೊಡೆಯುವಾಗ ಅವಳ 'ಯಶಸ್ಸು' (ಕೀರ್ತಿ ಅಥವಾ ಪ್ರಖ್ಯಾತಿ)ನ್ನು ತನ್ನ 'ಇಂದ್ರಿಯ' (ಶಕ್ತಿ, ಅಕ್ಷರಶಃ ಇಂದ್ರಿಯಶಕ್ತಿ)ದಿಂದ ನಾಶ ಮಾಡುತ್ತಿರುವನೆಂದು ಹೇಳಬೇಕೆಂದು ತಿಳಿಸಲಾಗಿದೆ. ಇಂಥ ಅವಕಾಶಗಳು ಲೈಂಗಿಕ ದಬ್ಬಾಳಿಕೆಗೆ ಅನುಮತಿ ನೀಡುತ್ತದಷ್ಟೇ ಅಲ್ಲದೆ ವೈವಾಹಿಕ ಹಿಂಸೆಯನ್ನು ಕಾನೂನು ಬದ್ಧಗೊಳಿಸಬಹುದೆನ್ನುವುದು ಸ್ಪಷ್ಟವಾಗುತ್ತದೆ.

ವಿವಾಹದಲ್ಲಿ ಲೈಂಗಿಕ ಹಿಂಸೆಯಲ್ಲದೆ ಬದುಕಿನ (ಸಾಮಾಜಿಕ) ಪ್ರಮಾಣಿಕಗಳಿಗೆ ಹೊಂದಿಕೊಳ್ಳುವಂತೆ ಪ್ರತಿದಿನ 'ಶಿಸ್ತಿಗೊಳಪಡಿಸಲು' ಅಥವಾ (ಸಮಾಜ) ಬಾಹಿರವೆಂದು ಪರಿಗಣಿಸಲಾದ ನಡವಳಿಕೆಗೆ ಶಿಕ್ಷೆ ನೀಡಲು ಮಹಿಳೆಯರ ಮೇಲೆ ಹಿಂಸಾತ್ಮಕ ಪ್ರಯೋಗಗಳನ್ನು ಮಾಡಬಹುದಾಗಿತ್ತು. ''ಮನೆಯ ಹೊರಗೆ ಸಂತೋಷದಿಂದಿರುವಂಥ'' ಸರಳವಾದ ವಿಚಾರಗಳನ್ನು ಪ್ರಮಾಣಿಕಗಳಿಂದ ಹೊರತಾಗಿಸುವಂತೆ ಪರಿಭಾಷಿಸಲಾಗಿತ್ತು. ಅರ್ಥಶಾಸ್ತ್ರದ ಪ್ರಕಾರ, ಅಂಥ ಸಂದರ್ಭಗಳಲ್ಲಿ ಸಭ್ಯ ನಡವಳಿಕೆಯನ್ನು ಕಲಿಸುವ ಅಂಗವಾಗಿ ಸೀಳಿದ ಬಿದಿರಿನ ಕಡ್ಡಿಯನ್ನೊಳಗೊಂಡಂತೆ ವಿವಿಧ ಸಾಧನಗಳಿಂದ ಹೆಂಡತಿಯ ಬೆನ್ನಿಗೆ ಹೊಡೆಯಬಹುದಾಗಿತ್ತು. (ಅರ್ಥಶಾಸ್ತ್ರ. 3,3,7-10). ಅದನ್ನು ಅರ್ಥಶಾಸ್ತ್ರವು ಕೇವಲ ಕಲ್ಪಿಸಿಕೊಂಡಿದ್ದು ಮಾತ್ರವಲ್ಲ, ಹೊಡೆಯುವುದಕ್ಕೆ ಅನುಮತಿಯನ್ನೂ

ನೀಡಿತ್ತೆನ್ನುವುದು ಸ್ಪಷ್ಟವಾಗುತ್ತದೆ. ಇದರಿಂದ ವಾಸ್ತವದಲ್ಲಿ ಕುಟುಂಬದಲ್ಲಿ ಇನ್ನೂ ಹೆಚ್ಚಿನ ಹಿಂಸೆ ಮಹಿಳೆಯರಿಗಾಗುತ್ತಿದ್ದ ಸಾಧ್ಯತೆಯಿದ್ದು ಹಿಂಸೆ ಅವರ ಬದುಕಿನ ಭಾಗವೇ ಆಗಿದ್ದಿರಬಹುದೆಂದು ಊಹಿಸಬಹುದು.

## ಮನೆಯ ಹೊರಗಿನ ಹಿಂಸೆ :

ಪ್ರಾಚೀನ ಕಾಲದ ಅತ್ಯಂತ ಪ್ರಚಲಿತವಾದ ಗ್ರಂಥಗಳಲ್ಲಿ ಕಾಮಸೂತ್ರ ಒಂದು. ಬೃಹದಾರಣ್ಯಕ ಉಪನಿಷತ್ತಿನಂತೆಯೇ ಆದೂ ಕೂಡ ಲೈಂಗಿಕ ಸಂಬಂಧಗಳಲ್ಲಿ ಹಿಂಸೆಗೆ ಅವಕಾಶವನ್ನು ನೀಡುತ್ತದೆ. ಪುರುಷರ ಹಿಂಸಾತ್ಮಕ ನಡವಳಿಕೆಗಳು ಹೆಚ್ಚು ಕಡಿಮೆ ಲೈಂಗಿಕತೆಯ ಕಾನೂನು ಬದ್ಧ ಅಭಿವ್ಯಕ್ತಿ ಎಂದು ಭಾವಿಸಲಾಗುತ್ತದೆಂದು ನಮಗೆ ತಿಳಿದುಬರುತ್ತದೆ. ಈ ಗ್ರಂಥವು ಪುರುಷರಿಗೆ ಸುಲಭವಾಗಿ ದಕ್ಕುವ ಮಹಿಳೆಯರ ಪಟ್ಟಿಗಳನ್ನೇ ಕೊಡುತ್ತದೆ. ಇದು ಸಂಬಂಧಿಸಿದ ಪುರುಷರು ಮತ್ತು ಮಹಿಳೆಯರ ಸ್ಥಾನಮಾನವನ್ನು ಅವಲಂಬಿಸಿತ್ತು. ಅತ್ಯಂತ ಶಕ್ತಿಶಾಲಿಯೆಂದು ಪರಿಗಣಿಸಲ್ಪಟ್ಟ ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ಅಗ್ರಸ್ಥಾನದಲ್ಲಿರುವ ರಾಜನು ಹೊಂದುವ ಮಹಿಳೆಯರ ಸಂಖ್ಯೆಗೆ ಮಿತಿಯಿರಲಿಲ್ಲ. ಪರಿಣಾಮವಾಗಿ, ಸಾಮಾಜಿಕ ಏಣಿಶ್ರೇಣಿಯ ಅತ್ಯಂತ ಕೆಳಹಂತದ ಗುಲಾಮೀ ಮಹಿಳೆಯರೂ ಸೇರಿದಂತೆ ಎಲ್ಲ ಮಹಿಳೆಯರೂ ಸಮಾಜದ ಉನ್ನತ ವರ್ಗಕ್ಕೆ ಸೇರಿದ ಯಾವುದೇ ವ್ಯಕ್ತಿಗೆ ''ಸಿಗಬಹುದಾದವರು'' ಎಂದು ತಿಳಿಯಲಾಗಿತ್ತು. 'ಸಿಗುವ' ಅಥವಾ 'ದಕ್ಕುವ' ದನ್ನು ಒಂದು ವೈವಿಧ್ಯಮಯ ಕಾರ್ಯಯೋಜನೆಗಳ ಮೂಲಕ ನಿಶ್ಚಿತಗೊಳಿಸಿಕೊಳ್ಳಬಹುದಾಗಿತ್ತು. ಅದರಲ್ಲಿ ಪಾತಿವ್ರತ್ಯವನ್ನು ಕೆಡಿಸುವುದು ಕೂಡ ಒಂದಾದರೆ, ಇನ್ನೊಂದು ಹಿಂಸೆಯನ್ನು ಕೊನೆಯ ಹಂತವಾಗಿ ಬಳಸುವುದಾಗಿತ್ತು. ಒಂದು ವೇಳೆ ಅಂಥ ನಿಯಮಗಳು ಜಾರಿಗೊಂಡದ್ದೇ ಆದರೆ ಮಹಿಳೆಯರು ತಮ್ಮ ಮುಂದಿನ ಚಟುವಟಿಕೆಗಳಲ್ಲಿ, ಯಾವುದೇ ಸಂದರ್ಭದಲ್ಲಿ ನಿರಂತರವಾಗಿ ಲೈಂಗಿಕ ಕಿರುಕುಳ ಮತ್ತು ಹಿಂಸೆಯನ್ನು ಅನುಭವಿಸಬೇಕಾಗುತ್ತಿತ್ತೆಂದು ಹೇಳಬಹುದಾಗಿದೆ

## ಯುದ್ಧ ಮತ್ತು ಮಹಿಳೆಯರ ಮೇಲಿನ ಹಿಂಸೆ :

ಪ್ರಾಚೀನ ಭಾರತದ ಇತಿಹಾಸದ ಪುನರ್ರಚನೆಯ ಆಧಾರಗಳಲ್ಲಿ ಶಾಸನಗಳೂ ಒಂದು. ಶಾಸನಗಳಲ್ಲಿ ಅನೇಕವು ರಾಜರ ಚಟುವಟಿಕೆಗಳನ್ನು ದಾಖಲಿಸುತ್ತವೆ. ಆಳರಸರು ಸದಾಕಾಲ ಒಂದಲ್ಲ ಒಂದು ಯುದ್ಧದಲ್ಲಿ ನಿರತರಾಗಿದ್ದರೆಂದು ಅವು ಹೇಳುತ್ತವೆ. ಆ ಯುದ್ಧಗಳು ತಮ್ಮ ತಮ್ಮ ಆಡಳಿತ ಕ್ಷೇತ್ರಗಳನ್ನು ಇನ್ನೊಂದರೊಂದಿಗೆ ಸೇರಿಸಿಕೊಳ್ಳಲು ಅಥವಾ ಕನಿಷ್ಠ ಧಾಳಿ ಮಾಡಲು ಹಾಗೂ ಲೂಟಿ ಮಾಡುವ ಪ್ರಯತ್ನಗಳಾಗಿದ್ದವು. ನಿರಂತರವಾದ ಯುದ್ಧಗಳ ಪ್ರಭಾವ ರಾಜರ ಮತ್ತಿತರರ ಕುಟುಂಬಗಳ ಮಹಿಳೆಯರ ಮೇಲೆ ಉಂಟುಮಾಡಬಹುದಾದ ಪರಿಣಾಮವನ್ನು ಚೆನ್ನಾಗಿ ಊಹಿಸಿಕೊಳ್ಳಬಹುದು.

### ಮಹಾಕಾವ್ಯಗಳು ಮತ್ತು ಮಹಿಳೆಯರ ಮೇಲಿನ ಹಿಂಸೆ :

ರಾಮಾಯಣ ಮತ್ತು ಮಹಾಭಾರತಗಳು ಅಕ್ಷರಶಃ ಸತ್ಯಕಥೆಗಳಲ್ಲ ಎನ್ನುವುದನ್ನು ಇತಿಹಾಸಕಾರರು ಸಿದ್ದಪಡಿಸಿದ್ದಾರೆ. ಅದೇ ಸಂದರ್ಭದಲ್ಲಿ, ಯಾವುದೇ ಒಂದು ಸಾಹಿತ್ಯಿಕ ಶೈಲಿಯಂತೆ ಅವು ಒಂದು ಸಾಮಾಜಿಕ ಸಂದರ್ಭದ ಪ್ರತಿನಿಧಿಯಲ್ಲದೆ, ಆ ಸಂದರ್ಭಕ್ಕೆ ಸಂಬಂಧಿಸಿರುತ್ತವೆ.

ಮಹಾಭಾರತದಲ್ಲಿ ದ್ರೌಪದಿಯು ತನ್ನ ಪತಿಯರಾದ ಪಾಂಡವರ ದೊಡ್ಡಪ್ಪನ ಮಕ್ಕಳಾದ ದುರ್ಯೋಧನ ಮತ್ತು ದುಶ್ಯಾಸನರಿಂದ ಹಿಂಸೆಗೆ ಹಾಗೂ ಬಹಿರಂಗವಾಗಿ ಅವಮಾನಕ್ಕೊಳಗಾಗುತ್ತಾಳೆ ಎನ್ನುವುದನ್ನು ನೆನಪುಮಾಡಿಕೊಳ್ಳಿ. ಇಲ್ಲಿ ಹಿಂಸೆ ಕುಟುಂಬದ ಒಳಗೆ ಇದೆ.

ರಾಮಾಯಣದಲ್ಲಿ ಸೀತೆಯು ಹೊರಗಿನವನಾದ ರಾವಣನಿಂದ ಅಪಹೃತಳಾಗುತ್ತಾಳೆ. ಅವಳನ್ನು ರಕ್ಷಿಸಿದ ನಂತರ ಕುಟುಂಬವು ಅವಳನ್ನು ಸ್ವೀಕರಿಸುವ ಮುನ್ನವೇ ತನ್ನ ಗಂಡನಿಂದ ಅಗ್ನಿಪರೀಕ್ಷೆಗೆ ಒಳಪಡುತ್ತಾಳೆ.

ಈ ಕಥೆಗಳಿಂದ ತಿಳಿದು ಬರುವುದೇನೆಂದರೆ, ಕುಟುಂಬದ ಒಳಗೆ ಅಥವಾ ವಿಸ್ತೃತಗೊಂಡ ಕುಟುಂಬದ ಸದಸ್ಯನಿಂದ ಮಹಿಳೆಯರ ಮೇಲೆ ಹಿಂಸೆ ನಡೆಯುವ ಸಾಧ್ಯತೆಯಿದೆ ಅಥವಾ ಅದನ್ನು ನಿರೀಕ್ಷಿಸಬಹುದಾಗಿದೆ.

ಪ್ರಾಚೀನ ಭಾರತೀಯ ಇತಿಹಾಸದಲ್ಲಿ ಮಹಾವೀರ ಪುರುಷರಲ್ಲಿ ಒಬ್ಬನೆಂದು ಸಾಮಾನ್ಯವಾಗಿ ಒಪ್ಪಿಕೊಳ್ಳಲಾದ ಸಮುದ್ರಗುಪ್ತನ ಉದಾಹರಣೆಯನ್ನೇ ತೆಗೆದುಕೊಳ್ಳಿ (ಕ್ರಿ.ಶ. 4ನೇ ಶತಮಾನ). ಪ್ರಖ್ಯಾತವಾದ ಪ್ರಯಾಗ ಪ್ರಶಸ್ತಿ ಅಥವಾ ಅಲಹಾಬಾದ್ ಸ್ತೂಪ ಸ್ತಂಭ ಶಾಸನವು ಆ ಪ್ರದೇಶದ ಶೋಷಿತರನ್ನು ಕುರಿತು ದಾಖಲಿಸುತ್ತದೆ.

ಅವನು ಸುಮಾರು ಒಂದು ಡಜನ್ ರಾಜರನ್ನು ಸದೆಬಡಿದಿದ್ದನೆಂದು , ಹಾಗೆಯೇ ತನ್ನ ಆಳ್ವಿಕೆಯನ್ನು ಒಪ್ಪಿಕೊಳ್ಳುವಂತೆ ಅನೇಕರನ್ನು ಒತ್ತಾಯಿಸಿದ್ದನೆಂದು ಹೇಳಿಕೊಳ್ಳುತ್ತಾನೆ. ಅಂಥ 'ಸಾಧನೆಗಳು' ಸಾಮಾನ್ಯ ಪುರುಷ ಮತ್ತು ಮಹಿಳೆಯರ ದೈನಂದಿನ ಜೀವನವನ್ನು ಏರುಪೇರು ಮಾಡಿರಲೇಬೇಕೆಂದು ಊಹಿಸಿದರೆ ತಪ್ಪಾಗಲಾರದು. ಸಿಂಹಳ ಮತ್ತು ವಾಯುವ್ಯ ಗಡಿ ಪ್ರದೇಶದ ಸೋಲುಂಡ ರಾಜರು ತಮ್ಮ ದಾಸ್ಯದ ಗುರುತಿಗಾಗಿ ತಮ್ಮ ಹೆಣ್ಣುಮಕ್ಕಳನ್ನು ತಮ್ಮನ್ನು ಗೆದ್ದ ರಾಜರಿಗೆ ಒಪ್ಪಿಸಬೇಕೆಂದು ನಿರೀಕ್ಷಿಸಲಾಗುತ್ತಿತ್ತು. ಇದು ಏನನ್ನು ಹೇಳುತ್ತದೆಯೆಂದರೆ, ರಾಜಪರಿವಾರದ ಮಹಿಳೆಯರು ತಮಗೆ ''ಉನ್ನತ'' ಸ್ಥಾನಮಾನಗಳಿದ್ದರೂ ಕೂಡ ತಮ್ಮ ಪುರುಷ ಬಾಂಧವರು ರೂಪಿಸಿದ ಸೈನಿಕ ಮತ್ತು ರಾಜಕೀಯ ತಂತ್ರಗಳಲ್ಲಿ ವಸ್ತುಗಳಾಗಿದ್ದಿರಬಹುದು.

ಸಾಮಾನ್ಯವಾಗಿ ಕಾಶ್ಮೀರದ ಇತಿಹಾಸವಾದ 'ರಾಜತರಂಗಿಣಿ' (12ನೇ ಶತಮಾನದಲ್ಲಿ ವಿರಚಿತ) ಖ್ಯಾತ ಕಲ್ಹಣನ ಕೃತಿಯನ್ನು ಗಮನಿಸಿದಾಗ ಕಂಡುಬರುವುದೇನೆಂದರೆ, ಯುದ್ಧದಲ್ಲಿ ಜಯಗಳಿಸುವುದೇನೆಂದರೆ, ಸಿಂಹಾಸನ ವಾರಸುದಾರರು ಅಥವಾ ಪ್ರಾಂತೀಯ ಮುಖ್ಯಸ್ಥರ ನಡುವೆ ನಡೆದ ಹೋರಾಟಗಳಾಗಿರುವುದಿಲ್ಲ; ಸೋತವರ ಮಹಿಳೆಯರ ಮೇಲೆ ಅವು ಅನಿವಾರ್ಯವಾಗಿ ಬೀರಿದ ಪ್ರಭಾವವನ್ನು ವರ್ಣಿಸುವುದಾಗಿರುತ್ತವೆ. ಅವರು ಬಿಳಿಚಿಕೊಳ್ಳುತ್ತಾರೆ; ಅವರ ಹಣೆಯ ಮೇಲಿನ ಕುಂಕುಮ ಅಳಿಸಿಹೋಗುತ್ತದೆ; ಅವರು ದುಃಖದಲ್ಲಿ ಮುಳುಗಿ ಹೋಗಿರುವಂತೆ ಚಿತ್ರಿಸಲಾಗುತ್ತದೆ. ನಾವು ಗಮನಿಸಬೇಕಾದುದೇನೆಂದರೆ, ಆ ಹಿಂಸೆಯನ್ನು ಎಲ್ಲೂ ಖಂಡಿಸುವುದಿಲ್ಲ. ಅದನ್ನು ಯುದ್ಧದಲ್ಲಿ ದೊರಕುವ ವಿಜಯದ ಸಾಮಾನ್ಯ ಸೂಚಿಯನ್ನಾಗಿ ಪರಿಗಣಿಸಲಾಗುತ್ತದೆ.

ಇತರ ಪ್ರಾಚೀನ ಭಾರತೀಯ ಸಂಪ್ರದಾಯಗಳಲ್ಲಿ ಸೇನಾನಾಯಕನನ್ನು ವೀರಪುತ್ರನೆಂದು ಭಾವಿಸಲಾಗಿದೆ. ಉದಾಹರಣೆಗೆ, ತಮಿಳ್ ಸಂಗಂ ಕಾವ್ಯ ಸಂಪ್ರದಾಯವು

ವ್ಯಾಪಕವಾದ ಹಿಂಸೆಯು ಪುರುಷರು ಮತ್ತು ಮಹಿಳೆಯರ ಮೇಲೆ ಅನಿವಾರ್ಯವಾಗಿ ಬೇರೆಬೇರೆಯೇ ಆದ ಪ್ರಭಾವವನ್ನು ಬೀರುತ್ತದೆ. ಗಲಭೆಗಳು, ದೇಶ-ದೇಶಗಳ ನಡುವಿನ ಯುದ್ಧಗಳು, ಆಡಳಿತ ನಡೆಸುವ ಶ್ರೀಮಂತ ವರ್ಗಗಳ ನಡುವಿನ ಘರ್ಷಣೆಗಳು, ಅಥವಾ ಜಾತಿ ಘರ್ಷಣೆಗಳ ಸಂದರ್ಭಗಳಲ್ಲಿ ಪುರುಷರು ಸಾಮಾನ್ಯವಾಗಿ ವಿರೋಧೀ ಗುಂಪಿನ ಪುರುಷರಿಗೆ ''ಪಾಠ ಕಲಿಸಲು'' ಅವರಿಗೆ ''ಸಂಬಂಧಿಸಿದ'' ಮಹಿಳೆಯರ ಮೇಲೆ ದಾಳಿ ಮಾಡುತ್ತಾರೆ. ಹೀಗೆ ಯಾವುದೇ ಹಿಂಸಾತ್ಮಕ ಪರಿಸ್ಥಿತಿಗಳಲ್ಲಿ ಉಂಟಾಗುವ ತೊಂದರೆಗಳನ್ನು ಎದುರಿಸಬೇಕಾಗುವುದರೊಂದಿಗೆ ಸಾಮಾನ್ಯವಾಗಿ ಮಹಿಳೆಯರು ಲೈಂಗಿಕ ದೌರ್ಜನ್ಯದ ಪರಮಾವಧಿಯ ಸ್ಥಿತಿಯನ್ನು ಅನುಭವಿಸುತ್ತಾರೆ.

### ಸತಿ ಪದ್ಧತಿ ಎಷ್ಟು ಪ್ರಾಚೀನ?

ಮುಸ್ಲಿಮರ ಧಾಳಿಗಳಿಗೆ ಮೊದಲು ಸತಿ ಆಚರಣೆಯ ಬಗ್ಗೆ ನಮಗೆ ತಿಳಿದಿರಲೇ ಇಲ್ಲ. ಅದನ್ನು ಹಿಂದೂ ಮಹಿಳೆಯರ ''ಗೌರವ'' ''ರಕ್ಷಣೆ''ಗಾಗಿ ಒಂದು ಕಾರ್ಯತಂತ್ರವನ್ನಾಗಿ ಬಳಸಲಾಯಿತು ಎಂದು ಎಷ್ಟು ಬಾರಿ ನಮಗೆ ಹೇಳಿಲ್ಲ? ಸತಿ ಆಚರಣೆಗೆ ಸಂಬಂಧಿಸಿದಂತೆ ಅತ್ಯಂತ ಪುರಾತನವಾದ ದಾಖಲೆಯು ಮಧ್ಯಪ್ರದೇಶದ ಈರಾನ್ ನಲ್ಲಿ ದೊರಕಿದ ಶಾಸನದಲ್ಲಿದೆ. ಇದರ ಕಾಲ ಕ್ರಿಸ್ತಶಕ 6ನೇ ಶತಮಾನ ಎನ್ನಬಹುದು (ಗುಪ್ತರ ಆಡಳಿತಾವಧಿ). ಇದು 7ನೇ ಶತಮಾನದಲ್ಲಿ ಇಸ್ಲಾಂ ಧರ್ಮವು ಹುಟ್ಟುವ ನೂರು ವರ್ಷಗಳ ಮೊದಲು ಹಾಗೂ 8ನೇ ಶತಮಾನದಲ್ಲಿ ಸಿಂಧ್ ಪ್ರಾಂತ್ಯಕ್ಕೆ ಅರಬರು ಬರುವ ಇನ್ನೂರು ವರ್ಷಗಳ ಮೊದಲು ಎನ್ನುವುದನ್ನು ಗಮನಿಸಬೇಕು.

ಇನ್ನೊಂದು ಹಂತದಲ್ಲಿ, ಗೌರವ / ಮಾನದ ನಂಬಿಕೆಗಳು ಮಹಿಳೆಯರ ಜೀವಕ್ಕಿಂತ ಮುಖ್ಯವಾಗಿ ಮುಂದುವರಿಯುವುದು ಯೋಗ್ಯವೆಂದು ಭಾವಿಸುತ್ತೀರಾ?

ವೀರ ಸೇನಾನಾಯಕನನ್ನು ಆದರ್ಶವನ್ನು ಎತ್ತಿ ಹಿಡಿಯುತ್ತದೆ. ಈ ಸಂಪ್ರದಾಯದ ಪ್ರಕಾರ ಯುದ್ಧದಲ್ಲಿ ಮಡಿಯುವಂತೆ ತಮ್ಮ ಮಕ್ಕಳನ್ನು/ಗಂಡಂದಿರನ್ನು ಪ್ರೋತ್ಸಾಹಿಸುವ ಮಹಿಳೆಯರನ್ನು ಆದರ್ಶ ತಾಯಂದಿರು/ಹೆಂಡಂದಿರು ಎಂದು ಭಾವಿಸಲಾಗುತ್ತಿತ್ತು.

### ಮಹಿಳೆಯರನ್ನು ''ರಕ್ಷಿಸುವುದು'' ?

(ಕ್ರಿ.ಪೂ. 2ನೇ ಶತಮಾನದಿಂದ ಕ್ರಿಸ್ತಶಕೆ 2ನೇ ಶತಮಾನದವರೆಗೆ ರಚಿತ)

ಮನುಸ್ಮೃತಿಯ ಅಧ್ಯಾಯಗಳನ್ನು ಪರಿಶೀಲಿಸೋಣ. ಅತ್ಯಾಚಾರವನ್ನು ನಾವು ಅರ್ಥಮಾಡಿಕೊಂಡರುವಂತೆ ಪುರುಷರು ''ರಕ್ಷಿತ'' ಅಥವಾ ''ಅರಕ್ಷಿತ'' ರಾದ ಮಹಿಳೆಯರನ್ನು ಸಂಭೋಗಿಸುತ್ತಾರೆ ಎಮ್ನ ವುದಕ್ಕೆ ಅತ್ಯಂತ ನಿಕಟವಾಗಿ ಆ ಭಾಗಗಳಲ್ಲಿ ಚರ್ಚಿಸಲಾಗಿದೆ. ಅಂಥ ಪರಿಸ್ಥಿತಿಗಳಲ್ಲಿ ಭಾಗಿಯಾಗುವ ಪುರುಷರು ಮತ್ತು ಬ್ರಾಹ್ಮಣರ ''ಶುದ್ಧತೆ''ಯನ್ನು ಕಾಪಾಡಿಕೊಳ್ಳುವಂತೆ ನೋಡಿಕೊಳ್ಳುವ ಉದ್ದೇಶವಿತ್ತು.

ಈ ನಿಯಮಗಳು ಎಷ್ಟರಮಟ್ಟಿಗೆ ಜಾರಿಯಲ್ಲಿತ್ತೆನ್ನುವುದಕ್ಕೆ ಯಾವುದೇ ಸಾಕ್ಷ್ಯಾಧಾರಗಳಿಲ್ಲ. ಏನೇ ಆದರೂ ಅಂಥ ಅವಕಾಶಗಳು ಇದ್ದವೆನ್ನುವುದೇ ಲೈಂಗಿಕ ಹಿಂಸೆ ಹೆಚ್ಚು ಕಡಿಮೆ ಸಾಮಾನ್ಯವಾಗಿತ್ತೆನ್ನುವುದಕ್ಕೆ ಆಧಾರವಾಗಿದೆ. ಅದು ಅಸ್ತಿತ್ವದಲ್ಲಿದ್ದ ಕಾರಣದಿಂದಲೇ ಅದನ್ನು ನಿಯಂತ್ರಿಸುವ ಮತ್ತು/ಅಥವಾ ತಡೆಗಟ್ಟುವ ಅಂಗವಾಗಿ ಶಿಕ್ಷೆಯ ಕ್ರಮಗಳನ್ನು ಮತ್ತು (ಮಾನದಂಡಗಳ) ಮಾದರಿಗಳನ್ನು ಅಭಿವೃದ್ಧಿಗೊಳಿಸಿರುವುದನ್ನು ಸಮರ್ಥಿಸಬಹುದಾಗಿದೆ.

### ಪುರಾಣ ಮತ್ತು ಹಿಂಸೆ :

ಪುರಾಣ ಸಾಹಿತ್ಯದ ಪುರಾವೆಯು ಹೆಚ್ಚು ಸಂಕೀರ್ಣವಾಗಿದೆ. ಧಾರ್ಮಿಕ ಆಚರಣೆಗಾಗಿ ಪುರೋಹಿತ ಕುಟುಂಬಗಳು ಬಹಳ ಅಚ್ಚುಕಟ್ಟಾಗಿ, ಗಮನವಿಟ್ಟು ಕ್ರೋಢೀಕರಿಸಿದ ಋಗ್ವೇದವನ್ನು *(ಕ್ರಿ.ಪೂ.1500-ಕ್ರಿ.ಪೂ* 1000) ನಾವು ಪರಿಗಣಿಸಬಹುದು. ವೈದಿಕ ಪುರಾಣ ಸಾಹಿತ್ಯಕ್ಕೆ ಕೇಂದ್ರಬಿಂದುವೆಂದರೆ, ನಾಯಕ ದೇವರಂತೆ ಪರಿಕಲ್ಪಿಸಲಾಗಿರುವ ಇಂದ್ರನೆನ್ನುವುದು ನಮಗೆ ತಿಳಿದೇ ಇದೆ. ಶೋಷಿತರ ನಡುವೆ ಉಷಾ ದೇವತೆಯೊಂದಿಗೆ ನಡೆದ ಯುದ್ಧಗಳಲ್ಲೆಲ್ಲಾ ಜಯವು ಇಂದ್ರನಿಗೇ ಲಭಿಸುವಂತೆ ಮಾಡಲಾಗಿದೆ. ಈ ಜಯವನ್ನು ಹಿಂಸಾತ್ಮಕ ಪದಗಳಲ್ಲಿ ವ್ಯಕ್ತಪಡಿಸಲಾಗಿದೆ. ಇಂದ್ರನು ಉಷೆಯ ರಥವನ್ನು ತನ್ನ ಸಿಡಿಲುಗಳಿಂದ ನಾಶ ಮಾಡಿ ಅವಳು ಪಲಾಯನ ಮಾಡುವಂತೆ ಮಾಡಿದನೆಂಬ ಉಲ್ಲೇಖವಿದೆ (ಋ.ವೆ.4,3, 9-11), ಇನ್ನೊಂದು ಕಡೆ, ಮಹಿಳಾ ವಿರೋಧಿಯಾದ ಸಾಮಾನ್ಯವಾದ ಹೇಳಿಕೆಗಳನ್ನು ಇಂದ್ರನೇ ಕೊಡುವಂತೆ ಮಾಡಲಾಗಿದೆ. ಉದಾಹರಣೆಗೆ, ಮಹಿಳೆಯರ ಮನಸ್ಸನ್ನು ನಿಯಂತ್ರಿಸುವುದು ಕಷ್ಟ, ಅವರಿಗೆ ಶಕ್ತಿಯಾಗಲೀ, ಸಾಮರ್ಥ್ಯವಾಗಲೀ ಇಲ್ಲ. ಎಂದು ಅವನು ಘೋಷಿಸುವಂತೆ ಮಾಡಲಾಗಿದೆ (ಋ. 8.33.17)

### ಪುರಾಣ ಕಥೆಗಳು ಸಾಮಾಜಿಕ ಆಚರಣೆಯನ್ನು ಯಾವಾಗಲೂ ಪ್ರತಿಬಿಂಬಿಸುತ್ತವೆಯೇ?

ಅನೇಕ ಪುರಾಣ ಕಥೆಗಳಲ್ಲಿ (ಕ್ರಿ.ಶ. 4ನೇ ಶತಮಾನದ ಅನಂತರದಲ್ಲಿ ಸಂಗ್ರಹಿಸಲಾದ ಕಥೆಗಳಲ್ಲಿ) ದೇವತೆಯನ್ನು ದುಷ್ಟಶಕ್ತಿಯೊಂದರ ವಿರುದ್ಧ ಕಾದಾಡುವ ಮತ್ತು ಅದನ್ನು ನಾಶ ಮಾಡುವಂತೆ ಪ್ರತಿನಿಧಿಸಲಾಗಿದೆ. ಆ ದುಷ್ಟಶಕ್ತಿ ಸಾಮಾನ್ಯವಾಗಿ ಗಂಡು ರಾಕ್ಷಸನೇ ಆಗಿರುತ್ತಾನೆ. ಏನೇ ಆದರೂ ಇಂದಿನ ಇತರ ಸಾಹಿತ್ಯ ಕೃತಿಗಳನ್ನು ಅಂದರೆ ನಾಟಕಗಳು, ಕಥೆಗಳು ಮತ್ತು ಶಾಸ್ತ್ರಗ್ರಂಥಗಳನ್ನು ನಾವು ಅವಲೋಕಿಸಿದಾಗ, ಮಹಿಳೆಯರಿಂದಾಗುವ ಹಿಂಸೆ ಸರ್ವೇಸಾಮಾನ್ಯವಾಗಿತ್ತು ಅಥವಾ ಸಾಮಾಜಿಕ ಘರ್ಷಣೆಗೆ ಅದೊಂದು ಕಾನೂನುಬದ್ಧವಾದ ಪ್ರತಿಕ್ರಿಯೆಯಾಗಿತ್ತು ಎಂದು ಹೇಳಲು ಯಾವುದೇ ಆಧಾರವಿಲ್ಲ.

ಮಹಿಳೆಯರನ್ನು 'ವರ್ಣ' ದಿಂದ ಗುರುತಿಸಲಾಗಿದೆ. ಅಂದರೆ, ಅತ್ಯಾಚಾರವನ್ನು ಒಂದು ಲೈಂಗಿಕ ಹಿಂಸೆಯ ಘಟನೆ ಎನ್ನುವುದಕ್ಕಿಂತ, ಅದೊಂದು ವರ್ಣವ್ಯವಸ್ಥೆಯ ವಿರುದ್ಧವಾದ ಅಪರಾಧ ಎಂದು ಭಾವಿಸಲಾಗುತ್ತಿತ್ತು. ''ಸಂರಕ್ಷಿತ'' ಬ್ರಾಹ್ಮಣಿಯನ್ನು ಕೆಡಿಸಿದ ಬ್ರಾಹ್ಮಣನಲ್ಲದವನಿಗೆ ಅತ್ಯಂತ ಹೆಚ್ಚು ಶಿಕ್ಷೆಯನ್ನು ವಿಧಿಸಲಾಗುತ್ತಿತ್ತು. ಅವನನ್ನು ಒಣಹುಲ್ಲಿನ ಬೆಂಕಿಯಲ್ಲಿ ಸುಡಬೇಕಿತ್ತು. ಬ್ರಾಹ್ಮಣ ಅತ್ಯಾಚಾರಿಗಳಿಗೆ ತಪ್ಪು ದಂಡವನ್ನು ಹಾಕಲಾಗುತ್ತಿತ್ತು; ಅವರಿಗೆ ದೈಹಿಕ ಶಿಕ್ಷೆ ಇರುತ್ತಿರಲಿಲ್ಲ. ಅತ್ಯಂತ ಕೆಳಜಾತಿಯ/ವರ್ಗದ ಮಹಿಳೆಯರ ಮೇಲೆ ಅತ್ಯಾಚಾರ ಮಾಡಿದಲ್ಲಿ ಅವರಿಗೆ ಅತ್ಯಂತ ಹೆಚ್ಚಿನ ತಪ್ಪು ದಂಡಗಳನ್ನು ವಿಧಿಸಲಾಗುತ್ತಿತ್ತು. (ಮ.ಸ್ಮೃತಿ: 8 7466). ಇದರ ಹಿನ್ನಲೆಯಾಗಿ ''ಕೆಳಸ್ಥಾನಮಾನದ'' ಮಹಿಳೆಯರನ್ನು ಸಂಭೋಗಿಸುವುದರಿಂದ ಬ್ರಾಹ್ಮಣರು ಅಶುದ್ಧರಾಗುತ್ತಾರೆ ಎನ್ನುವ ಕಾಳಜಿ ಮುಖ್ಯವಾಗಿತ್ತೇ ಹೊರತು ಮಹಿಳೆಯರನ್ನು ಹಿಂಸೆಯಿಂದ ರಕ್ಷಿಸುವುದಾಗಿರಲಿಲ್ಲವಾದ್ದರಿಂದ

ಇಂಥ ಹೇಳಿಕೆಗಳು ಬಹುಶಃ ಸಮಾಜದ ಪ್ರಬಲ ವರ್ಗಗಳ (ಪುರೋಹಿತರು/ಕ್ಷತ್ರಿಯರು) ಮಹಿಳೆಯರನ್ನು ಕುರಿತ ಧೋರಣೆಗಳನ್ನೇ ಪ್ರತಿನಿಧಿಸುತ್ತವೆ. ಅಲ್ಲದೆ ಅವು ಮಹಿಳೆಯರ ಮೇಲಿನ ವ್ಯಕ್ತ ಮತ್ತು ಅವ್ಯಕ್ತ ಹಿಂಸೆಗೆ ಅನುಕೂಲಕರ ವಾತಾವರಣವನ್ನು ಪೋಷಿಸಿರಬಹುದು.

### ಸಂಕ್ಷಿಪ್ತವಾಗಿ ಹೇಳಬೇಕೆಂದರೆ :

- ಮಹಿಳೆಯರು ವ್ಯಾಪಕವಾಗಿ ಹಿಂಸೆಯ ಸಂದರ್ಭಗಳನ್ನು ಎದುರಿಸಬೇಕಾಗುತ್ತಿತ್ತು.
- ಈ ಸಂದರ್ಭಗಳು ಯುದ್ಧಗಳನ್ನೊಳಗೊಂಡಿರುತ್ತಿದ್ದವು. ಇವು ನಿಜವಾಗಿಯೂ ಸಾಂಕ್ರಾಮಿಕವಾಗಿರುತ್ತಿದ್ದವು. ಹೆಚ್ಚಿನವು ಅಂತರಿಕ ಯುದ್ಧಗಳು ಅಂದರೆ ಗಡಿ ಪ್ರದೇಶಗಳಲ್ಲಿರುವ ಮುಖ್ಯಸ್ಥರು ನಡುವೆ ಅಥವಾ ಮುಖ್ಯಸ್ಥರು ಮತ್ತು ರಾಜರುಗಳ ನಡುವೆ ನಡೆಯುವ ಯುದ್ಧಗಳಾಗಿರುತ್ತಿದ್ದವು. ಬಾಹ್ಯದವು ಎಂದು ಹೇಳುವ ಧಾಳಿಗಳು ಹೆಚ್ಚು ಹಿಂಸಾತ್ಮಕವಾಗಿ ಅಥವಾ ವಿನಾಶಕಾರಿಯಾಗಿ ಯಾವಾಗಲೂ ಇರಬೇಕಾಗಿರಲಿಲ್ಲ.
- ಮಹಿಳೆಯರು ತಮ್ಮ ದೈನಂದಿನ ಬದುಕಿನ ಸಂದರ್ಭಗಳಲ್ಲಿ ಹಿಂಸೆಯನ್ನು ಅನುಭವಿಸಿರಬಹುದು. ನಾವು ನೋಡಿರುವಂತೆ ದಿನನಿತ್ಯದ ಲೈಂಗಿಕ ಸಂಬಂಧಗಳಲ್ಲಿ ಹಿಂಸೆಯು ಸಾಧ್ಯವಿದೆ ಎನ್ನುವುದನ್ನು ವೈದಿಕ/ಸಂಸ್ಕೃತ ಪರಂಪರೆಯಲ್ಲಿ ಗುರುತಿಸಲಾಗಿದೆ. ಇದು ಮಹಿಳೆಯರ ಬಗೆಗಿನ ಧೋರಣೆಗಳಿಗೆ ಸಂಬಂಧಿಸಿರಬಹುದು.

### ಆಧಾರ ಗ್ರಂಥಗಳನ್ನು ಕುರಿತು :

- ಈ ಅಧ್ಯಾಯದುದ್ದಕ್ಕೂ ಗ್ರಂಥಗಳನ್ನು ಉಲ್ಲೇಖಿಸಿದ್ದೇವೆ. ಅವುಗಳ ಕಾಲ ಗೊತ್ತೆ?
- ಋಗ್ವೇದವು ವಾಯುವ್ಯಗಡಿ ಪ್ರಾಂತ್ಯಕ್ಕೆ ಸಂಬಂಧಿಸಿದೆ.
- ವೇದಾಂತ/ವೇದೋತ್ತರ ಸಾಹಿತ್ಯವು - ಆರಂಭದ ಉಪನಿಷತ್ತುಗಳೂ ಸೇರಿದಂತೆ ಮಧ್ಯ-ಗಂಗಾ ಕಣಿವೆಗೆ ಸಂಬಂಧಿಸಿದೆ.
- ಇದೇ ರಾಮಾಯಣಕ್ಕೂ ಅನ್ವಯಿಸುತ್ತದೆ.
- ಮಹಾಭಾರತವು ಗಂಗಾ-ಯಮುನಾ ನದಿಗಳ ಸಂಗಮಸ್ಥಳಕ್ಕೆ ಸಂಬಂಧಿಸಿದೆ.
- ಮನುಸ್ಮೃತಿಯು ಉತ್ತರ ಭಾರತದ ಹೆಚ್ಚು ಪ್ರದೇಶಗಳಿಗೆ ಸಂಬಂಧಿಸಿದವು.
- ಕಾಮಸೂತ್ರವು ಪಾಟಲೀಪುತ್ರ ಅಂದರೆ ಇಂದಿನ ಪಾಟ್ನಾವನ್ನು ಕೇಂದ್ರೀಕರಿಸಿದೆ.
- ಪುರಾಣಗಳು ದೀರ್ಘಕಾಲಾವಧಿಯಲ್ಲಿ ಬೇರೆ ಬೇರೆ ಪ್ರದೇಶಗಳಲ್ಲಿ ಸಂಗ್ರಹಗೊಂಡಿದ್ದವು.
- ಒಂದು ಗ್ರಂಥದಲ್ಲಿರುವ ವಿಷಯವು ಬೇರೆ ಕಾಲ ಮತ್ತು ಸ್ಥಳಗಳಲ್ಲಿ ಒಪ್ಪಿತವಾಗಿರುವ ಅಗತ್ಯವಿಲ್ಲ ಎನ್ನುವುದನ್ನು ನಾವು ನೆನಪಿಡುವುದು ಉಪಯುಕ್ತ.

### ನೆನಪಿಡಿ :

- ಋಗ್ವೇದದಲ್ಲಿ ಪುರೋಹಿತರನ್ನು ಉದ್ದೇಶಿಸಿದ ಮಂತ್ರಗಳಿವೆ; ಅವುಗಳನ್ನು ಶತಮಾನಗಳವರೆಗೆ ಎಚ್ಚರಿಕೆಯಿಂದ ಸಂರಕ್ಷಿಸಲಾಗಿತ್ತು.
- ರಾಮಾಯಣ ಮತ್ತು ಮಹಾಭಾರತಗಳು ಹೆಚ್ಚು ವ್ಯಾಪಕವಾದ ಪ್ರೇಕ್ಷಕವರ್ಗಕ್ಕೆ ತಲುಪಿದವು. ಪ್ರಧಾನ ಕಥೆ ಇದ್ದಂತೆಯೇ ಇದ್ದಿತಾದರೂ ಸಂವಹನ ಪ್ರಕ್ರಿಯೆಯಲ್ಲಿ ಹಲವಾರು ಕಥೆಗಳು ಬಂದು ಸೇರಿಕೊಂಡವು. ಮಹಿಳೆಯರು ಮತ್ತು ಶೂದ್ರರಿಗೆ ವೇದಗಳನ್ನು ನಿರ್ಬಂಧಿಸಲಾಗಿತ್ತಾದರೂ ಅವರು ಮಹಾಕಾವ್ಯಗಳ ಕಥೆಗಳನ್ನು ಕೇಳಿದ್ದಿರಬಹುದು ಮತ್ತು ಹೇಳಿದ್ದಿರಬಹುದು; ಈ ಪ್ರಕ್ರಿಯೆಯಲ್ಲಿ ಅವುಗಳಿಗೆ ಮತ್ತಷ್ಟು ಕಥೆಗಳನ್ನು ಸೇರಿಸಬಹುದು ಅಥವಾ ಬದಲಾವಣೆ ಮಾಡಿದ್ದಿರಬಹುದು.

### ಈ ಪ್ರಶ್ನೆಗಳನ್ನು ಪರಿಗಣಿಸಿ :

ವೇದಗಳನ್ನು ಬ್ರಾಹ್ಮಣರ ಸಂಪೂರ್ಣ ಹತೋಟಿಯಲ್ಲಿಟ್ಟದ್ದು ಅದರ (ಅದನ್ನು ಕಲಿತ ಬ್ರಾಹ್ಮಣರ) ಘನತೆಯನ್ನು ಉಳಿಸಿಕೊಳ್ಳುವ ಸಾಧನವಾಗಿತ್ತೆ?

ಒಂದು ವೇಳೆ ಮಹಿಳೆಯರು ಮತ್ತು ಶೂದ್ರರು ವೇದಗಳನ್ನು ಕಲಿಯದಿದ್ದಲ್ಲಿ ಅವುಗಳಲ್ಲಿರುವ ''ಮೌಲ್ಯಗಳನು''ನ್ನು ಹೇಗೆ ಕಲಿಯುತ್ತಿದ್ದರು?

ಅಂಥ ಗುಂಪುಗಳಿಗೆ ತಮ್ಮದೇ ಆದ ಪರಂಪರೆಗಳನ್ನು ಬೆಳೆಸಿಕೊಳ್ಳುವುದು ಸಾಧ್ಯವಾಗುತ್ತಿತ್ತೆ? ಅವರು ಏನನ್ನು ಚಿಂತಿಸಿದರು ಮತ್ತು ಮಾಡಿದರೆಂದು ಹೇಗೆ ಹೇಳುವುದು? ಮಹಾಕಾವ್ಯಗಳು ಮತ್ತು ಪುರಾಣ ಗ್ರಂಥಗಳಲ್ಲಿ ಅಗಾಧವಾದ ವೈವಿಧ್ಯಗಳಿವೆ; ಅವು ಪ್ರಾದೇಶಿಕವಾಗಿ, ಒಮ್ಮೊಮ್ಮೆ ಜಾತಿಗನುಗುಣವಾಗಿ ವೈವಿಧ್ಯವನ್ನು ಪಡದುಕೊಳ್ಳುತ್ತವೆ. ಇವು ಈ ಗುಂಪುಗಳ ವಿಚಾರಗಳನ್ನು ಪ್ರತಿನಿಧಿಸಬಹುದು ಎಂದು ನಾವು ಹೇಳಲು ಸಾಧ್ಯವೆ? ಉದಾಹರಣೆಗೆ, ರಾಮಾಯಣದ ಪ್ರಾದೇಶಿಕ ಪಠ್ಯಗಳನ್ನು ಹುಡುಕಿ ಅವು ಸೀತೆಯ ಬಗ್ಗೆ ಏನನ್ನು ಹೇಳುತ್ತವೆಂದು ತಿಳಿಯಲು ಪ್ರಯತ್ನಿಸಿ ಸೀತೆಯ ಬಗ್ಗೆ ನೀವು ಈಗಾಗಲೇ ತಿಳಿದಿರುವುದಕ್ಕೆ ಅವು ಯಾವ ರೀತಿಗಳಲ್ಲಿ ಹೋಲುತ್ತವೆ ಅಥವಾ ಭಿನ್ನವಾಗಿವೆ?

ರಾಮಾಯಣದ ಬಗ್ಗೆ ನಿಮಗೆ ಹೇಗೆ ತಿಳಿಯಿತು ?

ಕನ್ನಡಕ್ಕೆ : ವೆಂ. ವನಜ

''ವಿಮೆನ್ ಇನ್ ಅರ್ಲಿ ಇಂಡಿಯಾ ಭಾಗ-2''

# ಸ್ವಾತಂತ್ರ್ಯ ಹೋರಾಟದಲ್ಲೊಂದು ಬೆಳ್ಳಿ ಚುಕ್ಕೆ - ಕಲಾ ಶಹಾನಿ

ಸ್ಪ್ಯಾರೋ ಆಯೋಜಿಸಿರುವ ಯೋಜನೆಗಳಲ್ಲಿ ಮೌಖಿಕ ಇತಿಹಾಸ ಕಮ್ಮಟ ಒಂದು ಭಾಗ - ಮಹಿಳೆಯರ ಹಾಡುಗಳು, ಜಾನಪದ ಗೀತೆಗಳು, ಲಾವಣಿಗಳು, ಕಥೆಗಳು ಸಾಂಪ್ರದಾಯಿಕ ಅಂಶಗಳಾಗಿ ನಮ್ಮ ಮೌಖಿಕ ಸಂಸ್ಕೃತಿಯ ಇತಿಹಾಸದಲ್ಲಿ ಮೂಡಿವೆ. ಈ ಇತಿಹಾಸವನ್ನು ಕಾಪಿಡುವ ಕಾರ್ಯವನ್ನು ಸ್ಪಾರೋ ಮಾಡುತ್ತಿದೆ. (ಮಹಿಳೆಯ ಕುರಿತಾದ ಸಂಶೋಧನೆಗಾಗಿ ಶಬ್ದ ಮತ್ತು ಚಿತ್ರ ಪತ್ರಾಗಾರ) ''ಬೊಗಸೆಯಲ್ಲಿಷ್ಟು ಬೆಳಕು ತುಂಬಿ'' - ಈ ಕನ್ನಡ ಪುಸ್ತಕದ ಸಂಪಾದಕರು ತುಳಸಿ ವೇಣುಗೋಪಾಲ್, ಕನಕ ಹಾ.ಮಾ ಮತ್ತು ಮಿತ್ರಾ ವೆಂಕಟ್ರಾಜ್. ಇದರಲ್ಲಿ ಆರು ಜನ ಮಹಿಳೆಯರ ಬಗೆಗಿನ ಜೀವನ ಮಾಹಿತಿ, ಅವರ ಕೊಡುಗೆ, ಅನುಭವಗಳನ್ನು ದಾಖಲಿಸಲಾಗಿದೆ. ಪ್ರತಿಯೊಂದು ವ್ಯಕ್ತಿ ಚಿತ್ರಣವೂ ನಮ್ಮ ವಾಸ್ತವದ ಜಟಿಲತೆಗಳ ಮಧ್ಯೆ ಸ್ಪೂರ್ತಿ ನೀಡುವ ವ್ಯಕ್ತಿತ್ವಗಳಾಗಿವೆ. ಹಾಗಾಗಿ 'ಮಾನಸದ' ಆಗಸ್ಟ್ ಸಂಚಿಕೆಯಲ್ಲಿ 'ಬೊಗಸೆಯಲ್ಲಿಷ್ಟು ಬೆಳಕು ತುಂಬಿ' ಪುಸ್ತಕದ 'ಸ್ವಾವಲಂಬನೆಯ ದೀಕ್ಷೆಯಲ್ಲಿ ಕಲಾ ಶಹಾನಿ' ಎಂಬ ಲೇಖನದ ಅತ್ಯಂತ ಸಂಕ್ಷಿಪ್ತ ರೂಪವನ್ನು ಪ್ರಕಟಿಸುತ್ತಿದ್ದೇವೆ. ಈ ಪುಸ್ತಕ ಅಪರೂಪದ ಒಂದು ದಾಖಲೆಯಾಗಿದೆ. ಓದುಗರು ನವಕರ್ನಾಟಕದಲ್ಲಿ ಈ ಪುಸ್ತಕವನ್ನು ಕೊಂಡುಕೊಳ್ಳಬಹುದಾಗಿದೆ. 'ಮಾನಸ'ದ ಬರುವ ಸಂಚಿಕೆಗಳಲ್ಲಿ ಇತರೇ ಐದು ವ್ಯಕ್ತಿತ್ವಗಳ ಸಂಕ್ಷಿಪ್ತ ಪರಿಚಯಗಳನ್ನು ನೀಡಲಾಗುತ್ತದೆ.

*ಸಂಪಾದಕ ಮಂಡಳಿ.*

ಒಂದೇ ದೀಪದ ಕುಡಿ
ಮಂದಿರ ಹಾಗೂ ಮಸೀದಿಯನ್ನು
ಬೆಳಗುತ್ತಿದೆಯಾದರೆ ಮತ್ತೇಕೆ
ಈ ಗದ್ದಲ, ಗೊಂದಲ
ಹಾಕಿದೆ ನಮ್ಮ ಜಗತ್ತಿಗೆ ಕತ್ತಲೆ ಮುಸುಕು

ನಮ್ಮ ನಾಡಿನ ಸ್ವಾತಂತ್ರ್ಯ ಸಂಗ್ರಾಮಕ್ಕೆ ತಮ್ಮದೇ ವಿಶಿಷ್ಟ ಕೊಡುಗೆ ನೀಡಿರುವ ಕಲಾ ಶಹಾನಿಯವರು ಹಾಗೂ ಅವರ ತಂದೆಯುವರು ಆಡುತ್ತಿದ್ದ ಮಾತು ಮೇಲೆ ಹೇಳಿದವುಗಳು. ಕಲಾ ಶಹಾನಿ 1919ರಲ್ಲಿ ಕರಾಚಿಯಲ್ಲಿ ಹುಟ್ಟಿದವರು. ಇವರ ತಂದೆ ಲೀಲಾರಾಮ್ ಪ್ರೇಮ್ ಚಂದ್ ಈಕೆಯ ಮೇಲೆ ಬಾಲ್ಯದಿಂದಲೂ ಪ್ರಭಾವ ಬೀರಿದವರು. ಆತನ ಮನೆಯಲ್ಲಿ ಕ್ರಿಶ್ಚಿಯನ್, ಪಾರ್ಸಿ, ಮುಸ್ಲಿಂರು ಹೀಗೆ ವಿವಿಧ ಜನ ತುಂಬಿರುತ್ತಿದ್ದರು. ಹಾಗಾಗಿ ಚಿಕ್ಕ ವಯಸ್ಸಿನಿಂದಲೂ ಕಲಾ ಶಹಾನಿ ಇತರ ಧರ್ಮದವರೊಟ್ಟಿಗೆ ಹೊಂದಿಕೊಂಡು ಬೆರೆತು ಹೋಗುವುದನ್ನು ಕಲಿಸಿದ್ದರು. ತಾಯಿ ಬುಲಾಬಾಯಿಯ ಸಂಕುಚಿತತೆಯೊಂದಿಗೆ ಕೂಡಾ ಕಲಾ ಚಿಕ್ಕ ವಯಸ್ಸಿನಿಂದಲೇ ಹೋರಾಡುವುದನ್ನು ಕಲಿತಿದ್ದರು.

ಗಾಂಧೀಜಿಯುವರ ಭಾಷಣ ಕೇಳಲು ಹತ್ತು ವರುಷದವರಿರುವಾಗ ಕಲಾ ಕರಾಚಿಯ ರಾಮ್‌ಭಾಗ್‌ಗೆ ಬಂದಿದ್ದರು. ಗಾಂಧೀಜಿಯವರ ಭಾಷಣ ಕೇಳಿದ ಸುಮಾರು ಮಹಿಳೆಯರು ತಮ್ಮಲ್ಲಿರುವ ಒಡವೆಗಳನ್ನು ನೀಡಿದ್ದರು. ಚಿಕ್ಕ ಕಲಾಳ ಬಳಿ ಒಡವೆಗಳಿರಲಿಲ್ಲ. ಹಾಗಾಗಿ ಆ ಕ್ಷಣದಲ್ಲಿ ಆ ಬಾಲೆ ಖಾದಿ ಧರಿಸುವುದನ್ನು ನಿರ್ಧರಿಸಿದರು. ತಾಯಿ ಈ ವಿಚಾರಕ್ಕೆ ಒಪ್ಪದಿದ್ದಾಗ, ತಾಯಿಯನ್ನು ಮಣಿಸಲು ಮೂರು ದಿನದ ಉಪವಾಸ ಕುಳಿತುಕೊಂಡರು. ಆಕೆಯ ಉಪವಾಸಕ್ಕೆ ಶರಣು ಹೋದ ತಾಯಿ ಆಕೆಗೆ ಎರಡು ಜೊತೆ ಖಾದಿ ಉಡುಪುಗಳನ್ನು ಖರೀದಿಸಿದ್ದರು. ಆ ಎರಡು ಜೋಡಿ ಬಟ್ಟೆಗಳನ್ನೇ ಒಗೆದು ಅವುಗಳನ್ನೇ ಹಾಕಿಕೊಂಡು ಓಡಾಡುತ್ತಿದ್ದ, ಬೇರೆಯ ಬಟ್ಟೆಗಳನ್ನೇ ಮುಟ್ಟದಿದ್ದ ಮಗಳಿಗಾಗಿ ನಂತರದಲ್ಲಿ ಆಕೆಯ ತಾಯಿ ಮತ್ತಷ್ಟು ಖಾದಿಯ ಉಡುಪುಗಳನ್ನು ಖರೀದಿಸಿದ್ದರು.

ಹೀಗೆ ಚಿಕ್ಕ ವಯಸ್ಸಿನಿಂದ ತಂದೆಯಿಂದ ಪ್ರಭಾವಿತರಾಗಿದ್ದ ಕಲಾ ಶಹಾನಿ ಸ್ವಾತಂತ್ರ್ಯ ಚಟುವಟಿಕೆಗಳತ್ತ ಸೆಳೆಯಲ್ಪಟ್ಟದ್ದರು. ಈ ಸಂದರ್ಭದಲ್ಲಿ ಆಕೆಗೆ ಚೇತಾನಂದ್ ಶಹಾನಿಯವರ ಪರಿಚಯವಾಗಿತ್ತು. ಸದಾ ಶಾಂತಿ ಬಯಸುತ್ತಿದ್ದ, ಸ್ವಾತಂತ್ರ್ಯ ಚಳುವಳಿಯಲ್ಲಿ ಗಾಢವಾಗಿ ತೊಡಗಿಸಿಕೊಂಡ ಚೇತಾನಂದ್ ಶಹಾನಿಯವರಿಗೆ

'ಶಾಂತಿ' ಎಂಬ ಹೆಸರನ್ನು ನೀಡಲಾಗಿತ್ತು. ವಿವಾಹದ ಬಳಿಕ ಜನರ ಸೇವೆಗೆ ತಾನು ತೊಡಗುವುದು ಸಾಧ್ಯವೇ ಎಂಬ ಅನುಮಾನವಿದ್ದರೂ, ತಾಯಿಯ ವಿರೋಧದ ಮಧ್ಯೆಯೇ ಕಲಾ ಶಾಂತಿ ಶಹಾನಿಯವರನ್ನು ಮದುವೆಯಾದರು.

ಅವರ ಮನೆಯಲ್ಲಿ ಸ್ವಾತಂತ್ರ್ಯ ಚಳುವಳಿಗೆ ಸಂಬಂಧಪಟ್ಟ ಅನೇಕ ವ್ಯಕ್ತಿಗಳು ಬಂದು ಹೋಗುತ್ತಿದ್ದರು. ಇಂತಹವರ ಮಧ್ಯೆಯೇ ಕಲಾ ಶಹಾನಿ ತಮ್ಮ ಬದುಕನ್ನು ರೂಪಿಸಿಕೊಳ್ಳುತ್ತಿದ್ದರು. ಚರಕ ತರಗತಿಗೆ ಹೋಗುವುದು. ಮನೆಯಲ್ಲಿಯೆ ಉಳಿದಿದ್ದರು. ಆ ಸಮಯದಲ್ಲಿ ತರುಣಿಯಾಗಿದ್ದ ಆಕೆಗೆ ಒಂಟಿತನ ಕಾಡಿದ್ದರೂ ತಾಯಿಯ ಎದುರು ಧೈರ್ಯದ ಮುಖವಾಡ ಧರಿಸುತ್ತಿದ್ದರು. ದೇಶಕ್ಕಾಗಿ ಶಾಂತಿ ಶಹಾನಿ ಜೈಲಿಗೆ ಹೋದುದರಿಂದ ಅದಕ್ಕಾಗಿ ಸಂತೋಷ ಪಡಬೇಕೆಂದು ತಾಯಿಯ ಬಳಿ ನುಡಿಯುತ್ತಿದ್ದರು. ಆಕೆಯಲ್ಲಿದ್ದ ಬದ್ಧತೆಯಿಂದಾಗಿ ಆ ಒಂಟಿ ದಿನಗಳನ್ನು ಧೈರ್ಯದಿಂದಲೇ ಎದುರಿಸಿದ್ದರು.

ಭಾರತದ ವಿಭಜನೆಯ ಸಂದರ್ಭದಲ್ಲಿ ಕಲಾ ಶಹಾನಿ

ಸಿ.ಎಸ್. ಲಕ್ಷ್ಮಿ (ಮೂಲ ಲೇಖಕಿ) ಯವರಿಗೆ ಕಲಾ ಶಹಾನಿಯ ಪರಿಚಯ ಮಗ ಗೋವಿಂದ ಹಾಗೂ ಸೊಸೆ ರೋಶನ್ ರಿಂದಾಗಿ, ಮರೆಯಲ್ಲೇ ಗುಟ್ಟಾಗಿ ಇರಬಯಸಿದವರ ಮೌಖಿಕ ಇತಿಹಾಸದ ದಾಖಲಾತಿ ಈ ಇಡೀ ಪುಸ್ತಕದ ಕೊಡುಗೆ. ಮೌಖಿಕ ಇತಿಹಾಸದ ಕಮ್ಮಟಕ್ಕೆ ಕಲಾ ಶಹಾನಿ ಹಿಂಜರಿಕೆಯಿಂದಲೇ ಒಪ್ಪಿಕೊಂಡರು ಎನ್ನುತ್ತಾರೆ ಲಕ್ಷ್ಮಿ. ಜುಲೈ 27, 1997ರಂದು ಕಮ್ಮಟದಲ್ಲಿ ಸಂವಾದ ತಾಯಿ-ಮಗನ ಮಧ್ಯೆ ನಡೆದು ಕಲಾ ಶಹಾನಿಯವರ ಆಂತರಿಕ, ಆಧ್ಯಾತ್ಮಿಕ ಶೋಧನೆಗಳ ಪರಿಚಯವಾಗಲು ಸಹಾಯಕವಾಯಿತು. ಈಕೆ ಎಪ್ಪತ್ತೆಂಟರ ಇಳಿ ವಯಸ್ಸಿನಲ್ಲಿ ಕೂಡಾ ದುಡಿಯುತ್ತಿದ್ದಾರೆ. ಕಮ್ಮಟದಲ್ಲಿ ವಿದ್ಯಾರ್ಥಿಗಳೊಂದಿಗೆ, ಮಗನೊಂದಿಗೆ ನಡೆಸಿದ ಸಂವಾದ, ಆದಾನ-ಪ್ರಧಾನ ಆಧರಿಸಿ ಸ್ಪ್ಯಾರೋ ಕಲಾ ಶಹಾನಿಯವರ ಜೀವನ ವೃತ್ತಾಂತ ಪ್ರಕಟಿಸಿದೆ. ಮೌಖಿಕ ಇತಿಹಾಸದ ಹಿನ್ನಲೆಯಲ್ಲಿ ಕಲಾ ಶಹಾನಿಯವರಂತಹ ಬದುಕು, ಕೊಡುಗೆ ಎಷ್ಟು ಅಮೂಲ್ಯವಾದುದು ಎಂದು ವ್ಯಕ್ತವಾಗುತ್ತದೆ.

ರಾಷ್ಟ್ರಭಾಷೆಯ ಮಹತ್ವಕ್ಕೆ ಒತ್ತು ಕೊಡುವ ನೆಲೆಯಲ್ಲಿ ಹಿಂದಿ ಪಾಠ ಹೇಳಿ ಕೊಡುತ್ತಿದ್ದರು. ಶಾಂತಿ ಶಹಾನಿಯವರು ಸ್ವಂತವಾಗಿ ಮದರ್‌ಲ್ಯಾಂಡ್ ಪ್ರೆಸ್ ಒಂದನ್ನು ನಡೆಸುತ್ತಿದ್ದರು. ಇವರು ಕ್ವಿಟ್ ಇಂಡಿಯ ಪತ್ರಿಕೆಯನ್ನು ಗುಪ್ತವಾಗಿ ಪ್ರಕಟಿಸುತ್ತಿದ್ದು ಆ ಮೂಲಕ ಬ್ರಿಟಿಷರ ವಿರುದ್ಧ ಸತ್ಯಾಗ್ರಹ ಮಾಡುವಂತೆ ಜನರನ್ನು ಪ್ರೇರೆಪಿಸುತ್ತಿದ್ದರು. ಕಲಾ ಶಹಾನಿ ಸ್ವಾತಂತ್ರ್ಯ ಸಂಗ್ರಾಮದ ಮೆರವಣಿಗೆಯಲ್ಲಿ ಭಾಗವಹಿಸುತ್ತಾ 'ನಮ್ಮ ದೇಶ ಭಾರತ, ಪಡೆಯುತ್ತೇವೆ, ಪಡೆಯುತ್ತೇವೆ, ನಮ್ಮ ದೇಶವನ್ನು ಪಡದೇ ಪಡೆಯುತ್ತೇವೆ' ಎಂದು ಘೋಷಣೆಗಳನ್ನು ಇತರರೊಂದಿಗೆ ಸೇರಿ ಕೂಗುತ್ತಿದ್ದರು. ಹೀಗೇ ಒಮ್ಮೆ ಬಹಿರಂಗವಾಗಿ ಆಕೆ ಸ್ವಾತಂತ್ರ್ಯದ ಶಪಥಗೈದುದರಿಂದ ಆಕೆ ಜೈಲಿಗೆ ಹೋಗಬೇಕಾಯಿತು. 1942ರಲ್ಲಿ ಕ್ವಿಟ್ ಇಂಡಿಯಾ ಕರಪತ್ರಗಳು ಇವರ ಮನೆಯಲ್ಲಿ ಕಂಡು ಬಂದ ಕಾರಣದಿಂದಾಗಿ ಶಾಂತಿ ಶಹಾನಿಯವರನ್ನು ಬ್ರಿಟೀಷ್ ಸರ್ಕಾರ ಬಂಧಿಸಿತ್ತು. ಆರು ತಿಂಗಳು ಗಂಡ ಜೈಲಲ್ಲಿ ಇರುವಾಗ ಕಲಾ ಅವರು ಕಷ್ಟದ ದಿನಗಳನ್ನು ಎದುರಿಸಿದ್ದರು. ಮುದ್ರಣಾಲಯವನ್ನು ಸಂಭಾಳಿಸಿಕೊಂಡು ತಮ್ಮ ದೈಹಿಕ, ಮಾನಸಿಕ ಆಘಾತಗಳನ್ನು ಅನುಭವಿಸಿದರು. ಜನವರಿ 6, 1948 ರಂದು ಕರಾಚಿಯಲ್ಲಿ ದೊಂಬಿ ಆರಂಭವಾಗಿತ್ತು. ಅಲ್ಲಿಯ ದ್ವೇಷ, ದುರಾಗ್ರಹ, ಆವೇಶದ ಬಗ್ಗೆ ಕಲಾ ಶಹಾನಿ ನೋವಿನಿಂದಲೇ ತಮ್ಮ ಮನಸ್ಥಿತಿಯನ್ನು ವಿವರಿಸುತ್ತಾರೆ. ಅಂದು ಪತಿ ಶಾಂತಿ ಶಹಾನಿ ಬೆಳಿಗ್ಗೆ ಹತ್ತು ಘಂಟೆಯ ಸುಮಾರಿಗೆ ಮನೆಬಿಟ್ಟು ಕರಾಚಿಯಲ್ಲಿದ್ದ ಕಾಂಗ್ರೆಸ್ ಹೌಸ್‌ಗೆ ಹೋಗಿದ್ದರು. ಆಗ ಅವರು ಕಾಂಗ್ರೆಸ್ ಹೌಸ್‌ಗೆ ಕಾರ್ಯದರ್ಶಿಯಾಗಿದ್ದರು. ಕಾಂಗ್ರೆಸ್ ಹೌಸ್‌ಗೆ ಬೆಂಕಿ ಹಚ್ಚಿದುದರಿಂದ ಒಳಗಿದ್ದವರೆಲ್ಲ ಸುಟ್ಟು ಹೋಗಿದ್ದಾರೆಂದು ಸುದ್ದಿ ಕೇಳಿ ಕಲಾ ಶಹಾನಿ ಕ್ಷೋಭೆಗೊಂಡಿದ್ದರು. ಮಗು ಗೋವಿಂದನಿಗೆ ಜ್ವರ ಕಾಯುತ್ತಿತ್ತು. 27 ವರುಷದ ಕಲಾ ಶಹಾನಿಗೆ ನೆರವಿಗೆ ಬಂದವರು ಮುಸ್ಲಿಂ ನೆರೆ ಮನೆಯವರು. ಕಲಾ ಅವರನ್ನು ಹೊರಗೆ ಕರೆದೊಯ್ಯಲು ಅವರಿಗೆ ಬುರ್ಖಾ ಹಾಕಿ ಗೋವಿಂದನಿಗೆ ಕಪ್ಪು ಬಳೆ ಹಾಕಿದ್ದರು. ತಾನು ಬರಿಯ ಖಾದಿ ಉಡುವುದಾಗಿ ಕಲಾ ಶಹಾನಿ ಹೇಳಿದ್ದಕ್ಕೆ ನೆರೆ ಹೊರೆಯವರು ರಸ್ತೆಯ ಅಮಾನುಷ ರಾಜಕೀಯವನ್ನು ಆಕೆಗೆ ವಿವರಿಸಿದ್ದರು. ಅಷ್ಟರಲ್ಲಿಯೇ ಕಾಂಗ್ರೆಸ್ ಹೌಸ್‌ನಲ್ಲಿ ಅಗ್ನಿಕುಂಡದೊಳಗೆ

ಬಿದ್ದವರನ್ನು ರಕ್ಷಿಸುವ ಕಾರ್ಯ ತಿಳಿದು ಬಂದು ಅವರಿಗೆ ಸಮಾಧಾನವಾಗಿತ್ತು. ಆ ದೀರ್ಘ ರಾತ್ರಿಯನ್ನು ಕಳೆಯುವ ಸಂದರ್ಭದಲ್ಲಿ ಮುಸ್ಲಿಂ ನೆರೆ ಮನೆಯವರು ಕುರಾನ್ ಶರೀಫ್‌ನನ್ನು ಪಠಿಸುತ್ತಾ, ಇನ್ನಿತರರು ಭಗವದ್ಗೀತೆ ಓದುತ್ತಾ, ಭಜನೆ ಹಾಡುತ್ತಾ ಕುಳಿತು ಕೊಂಡಿದ್ದರು. ಶಾಂತಿ ಶಹಾನಿ ರಾತ್ರಿ 2-30ಕ್ಕೆ ವಾಪಸ್ಸು ಬಂದಿದ್ದರು.

ಕರಾಚಿ ಬಿಟ್ಟು ಬರುವಾಗ ಕಲಾ ಶಹಾನಿ ನೊಂದಿದ್ದರು. ಮಗುವಿನ ಕಾರಣದಿಂದ ಹೋಗಲೇ ಬೇಕೆಂದು ಎಲ್ಲರೂ ಒತ್ತಾಯಿಸಿದಾಗ ಭಾರವಾದ ಹೃದಯದಿಂದ ಫೆಬ್ರುವರಿ 3, 1948ರಂದು ಕರಾಚಿಗೆ ವಿದಾಯ ಹೇಳಿದ್ದರು. ಭಾರತಕ್ಕೆ ತಲುಪಿದಾಗ 'ಶರಣಾರ್ಥಿ'ಗಳು ಎಂಬ ಹಣೆಯ ಪಟ್ಟ ಇವರಿಗೆ ಸೇರಿಕೊಂಡಿತ್ತು. ಇದನ್ನು ಅರಗಿಸಿಕೊಳ್ಳಲು ಕಲಾ ಶಹಾನಿಯವರಿಗೆ ಕಷ್ಟವಾಗುತ್ತಿತ್ತು. ''ಅದು ನಮ್ಮನ್ನು ನೋಯಿಸುತ್ತಿತ್ತು, ಘೋರವಾದ ವಿಭಜನೆಯಿಂದ ನಾನು ಇನ್ನಿಲ್ಲದಂತೆ ಕಷ್ಟ ಅನುಭವಿಸಿದ್ದೇವೆ. ಮತ್ತು ಆದರ ಮೇಲೆ ಇದೀಗ ಈ ಅವಮಾನ''. ನಾವು ಶರಣಾರ್ಥಿಗಳಲ್ಲ, ನಾವು ನಿಮ್ಮದೇ ಒಂದು ಭಾಗ, ನಾವು ನಮ್ಮ ಕಾಲ ಮೇಲೆ ನಿಲ್ಲಬಲ್ಲೆವು ಮತ್ತು ಅದನ್ನು ಸಾಧಿಸಿದ್ದೇವೆ ಕೂಡಾ.... ನಾವು ಸ್ವಾವಲಂಬಿಗಳು ಎನ್ನುವುದನ್ನು ಭಾರತಕ್ಕೆ ತೋರಿಸಿಕೊಟ್ಟೆವು.

1949ರ ನಂತರ ಬಹು ಮಂದಿಯ ರಾಜಕೀಯ ಚಟುವಟಿಕೆಗಳು ದುರುಪಯೋಗಕ್ಕೆ ಬಲಿಯಾಗುತ್ತಿದ್ದುದನ್ನು ಕಂಡು, ಶಕ್ತಿ ಪ್ರದರ್ಶನಕ್ಕೆ ಒಳಾಗುಗುತ್ತಿದ್ದುದನ್ನು ಕಂಡು ರಾಜಕೀಯದಿಂದ ದೂರವಿರಲು ಕಲಾ ಹಾಗೂ ಆಕೆಯ ಪತಿ ಶಾಂತಿ ಶಹಾನಿ ನಿರ್ಧರಿಸಿದ್ದರು. ಇವರು ಮಲಾಡ್‌ನಲ್ಲಿ ಬಾಡಿಗೆ ಮನೆಯೊಂದರಲ್ಲಿ ವಾಸಿಸತೊಡಗಿದ್ದರು. ನಂತರದ ಹತ್ತು ವರುಷಗಳಲ್ಲಿ ಕಲಾ ಶಹಾನಿ ಅನೇಕ ವೈಯಕ್ತಿಕ ಪೆಟ್ಟುಗಳನ್ನು ತಿಂದರು. ಪತಿ, ತಾಯಿ, ಆರು ವರುಷದ ಮಗಳ ಮರಣ ಕಲಾ ಶಹಾನಿಯವರ ಎದೆ ಒಡೆಯುವಂತೆ ಮಾಡಿತ್ತು. ತಂದೆಯ ಮಾತು ಆ ಸಂದರ್ಭದಲ್ಲಿ ಅವರನ್ನು ಕಾಪಾಡಿತು ಎಂಬುದನ್ನು ಕಲಾ ಶಹಾನಿ ನೆನಪಿಸಿಕೊಳ್ಳುತ್ತಾರೆ. 'ನಿನ್ನ ಕಾಲ ಮೇಲೆಯೇ ನೀನು ನಿಂತರೆ, ನೀನೊಬ್ಬ ಸ್ವಾಭಿಮಾನ ಉಳ್ಳ ವ್ಯಕ್ತಿಯಾಗಬಹುದು, ಹೀಗೆ ನಿನ್ನ ಮಗನ ಭವಿಷ್ಯವೂ ಉಜ್ವಲವಾಗುವುದಲ್ಲದೇ ಆತ ಸ್ವತಂತ್ರ್ಯ ಮನೋಭಾವನೆಯುಳ್ಳವನಾಗಿ ಬೆಳೆಯಬಹುದು'. ಹೀಗಾಗಿ ಮನೆಯಲ್ಲಿ ಹಲವರಿಗೆ ಇಷ್ಟವಿಲ್ಲದಿದ್ದರೂ ಮೂವತ್ತೇಳು ವರುಷದ ಕಲಾ ಹಿಂದೂಸ್ತಾನ್ ಪತ್ರಿಕೆಯ ಕಿತಾಬ್ ಘರ್ ವಿಭಾಗದಲ್ಲಿ ಕೆಲಸಕ್ಕೆ ಸೇರಿ ಅಲ್ಲಿಯೇ ಮುಂದುವರೆದಿದ್ದಾರೆ. ದುಡಿಮೆ ಆಕೆಗೆ ವಿಶ್ವಾಸ ನೀಡಿದ್ದಲ್ಲದೇ ತಾಯಿ ಹಾಗು ಮಗ ಗೋವಿಂದನ ನಡುವೆ ಒಂದು ಅಸಾಮಾನ್ಯ ಬಾಂಧವ್ಯವನ್ನು ಸೃಷ್ಟಿಸಿತ್ತು.

ಕಲಾ ಶಹಾನಿಯರ ಈ ಬದುಕು ಹೀಗೆ ಮೌಖಿಕ ಇತಿಹಾಸದ ಕಮ್ಮಟದಲ್ಲಿ ವ್ಯಕ್ತಗೊಂಡು 'ಬೊಗಸೆಯಲ್ಲಿಷ್ಟು ಬೆಳಕು ತುಂಬಿ' ಪುಸ್ತಕದಲ್ಲಿ ದಾಖಲಾದುದು ಸ್ಮರಣೀಯ ಹಾಗೂ ಗಹನವಾದ ವಿಚಾರವಾಗಿದೆ. ಮರೆತು ಹೋಗಬಹುದಾದ ಮಹಿಳೆಯರ ಬದುಕನ್ನು ದಾಖಲುಗೊಳಿಸುವ ಲೇಖಕಿಯರ ಪ್ರಯತ್ನ ಸ್ತುತ್ಯಾರ್ಹವಾಗಿದೆ.

*ಶಾಂತಿ ಶಹಾನಿ ತೀರಿಕೊಂಡಾಗ ಕಲಾ ಶಹಾನಿಯವರಿಗೆ ಅನುತಾಪ ಸೂಚಿಸುವ ಹಲವಾರು ಪತ್ರಗಳು ಬಂದವು. ಅವುಗಳಲ್ಲಿ ಒಂದನ್ನು ಆಕೆ ಕಳೆದ ಇಪ್ಪತ್ತೈದು ವರ್ಷಗಳಿಂದ ಕಾಪಿಟ್ಟುಕೊಂಡು ಬಂದಿದ್ದಾರೆ. ಅದು ಲಾರ್ಕ್‌ನ್‌ನಲ್ಲಿ ಆಕೆಯ ತಂದೆಯ ವಿದ್ಯಾರ್ಥಿಯಾಗಿದ್ದ ಮುಸ್ಲಿಂ ವ್ಯಕ್ತಿ ಬರೆದ ಪತ್ರ. ಒಕ್ಕಣೆ ಹೀಗಿತ್ತು : ಪ್ರಿಯ ತಂಗಿ, ನಾನು ನಿಮ್ಮ ತಂದೆಯ ವಿದ್ಯಾರ್ಥಿಯಾಗಿದ್ದೆ. ಅವರಂತಹ ಇನ್ನೊಬ್ಬ ವಾತ್ಸಲ್ಯಮಯಿ ವ್ಯಕ್ತಿಯನ್ನು ಈ ವರೆಗೆ ಕಂಡಿಲ್ಲ. ಅವರಿಂದ ನಾವು ಸಾಕಷ್ಟು ಮಮತೆ ಮತ್ತು ಪ್ರೀತಿಯನ್ನು ಪಡೆದಿದ್ದೇವೆ. ಹಾಗೆ ನಾವೆಲ್ಲರೂ ವಿದ್ಯಾರ್ಥಿಗಳು ಸಹೋದರ, ಸಹೋದರಿಯರು. ನನ್ನ ತಂಗಿಯ ನೋವಿನ ಗಳಿಗೆಯಲ್ಲಿ ಆಕೆಯ ಜತೆಗಿರಬೇಕೆಂದಿದೆ. ಆದರೆ... ಹುಕುಮತ್ ಕಾ ಝುಲ್ಮ್ ಹಂ ಲೋಗೋಂಕೊ ಅಲಗ್ ಕರ್ ದಿಯಾ. (ನಿರಂಕುಶ ಪ್ರಭುತ್ವ ನಮ್ಮನ್ನು ಅಗಲುವಂತೆ ಮಾಡಿದೆ).*

ಆಧಾರ : "ಬೊಗಸೆಯಲ್ಲಿಷ್ಟು ಬೆಳಕು ತುಂಬಿ"

– ಚಂಪಾ. ಎಚ್.ಎಸ್

# ಯಜಮಾನ - ಯಜಮಾನಿಕೆ

ಗೇಟ್ ಬಳಿ ಮೋಟರ್‌ಬೈಕ್‌ನ ಶಬ್ದ ಕೇಳಿದೊಡನೆ ಸುಶೀಲೆಗೆ ಎದೆ ಢವ ಢವ ಹೊಡೆದುಕೊಳ್ಳಲಾರಂಭಿಸಿತು. ಆದರೆ ಈ ಆತಂಕಕ್ಕೆ ಕಾರಣವೇನು? ಕಾರಣ ಇಷ್ಟೇ - ಮನೆಗೆ ಬಂದೊಡನೆ ತಿಂಡಿಯ ಜೊತೆಗೆ ಟೀ ಮಾಡಿಕೊಡಲು ಸಕ್ಕರೆ ಖಾಲಿಯಾಗಿದೆ. ಸರಿ ಅಂಗಡಿಯಲ್ಲಿ ಕೆ.ಜಿ.ಗೆ ರೂ 20/- ತೆರಲು ಸಾಕಾಗಿ ಬರುವ ಸಂಪಾದನೆ ಸಾಲದು. ಆದ್ರೆ ಏನು ಮಾಡೋದು? ಹೆಚ್ಚಿಗೆ ಮಾತಾಡಿದ್ರೆ ತನ್ನ ಘನತೆ, ಅಂತಸ್ತು, ಸಮಾಜದಲ್ಲಿ ತನ್ನ ವಕೀಲ ವೃತ್ತಿಗೆ ಇರುವ ಗೌರವ (ಅಗೌರವದ!) ಬಗ್ಗೆ ಕಿರುಚಾಟ, ಒಣ ಜಂಭದ ಮಾತುಗಳ ಸುರಿಮಳೆ. ಗಂಡನ ಕೆಂಪಾದ ಕಣ್ಣುಗಳನ್ನು ಕಂಡೊಡನೆ ಅವಳ ಎದೆಯ ಬಡಿತ ಸ್ವಲ್ಪ ಜಾಸ್ತಿಯಾದಂತೆ ಅನಿಸುವುದು ಸಾಮಾನ್ಯವಾದ ವಿಷಯ. ಮೆಟ್ಟಿಲುಗಳನ್ನು ಹತ್ತುವ ಶೂಗಳ ಶಬ್ದ ಬಂದೊಡನೆ ಗೇಟ್‌ನ ಬೀಗ ತೆಗೆದು, ಬಾಗಿಲುಗಳನ್ನು ತೆರೆದಿಡುವುದು ಅವಳಿಗೆ ಅರಿವಿಗಿಲ್ಲದಂತೆ ನಡೆಯುವ ಕಾರ್ಯ ವೈಖರಿ.

ಕೈಕಾಲು ತೊಳೆದುಕೊಂಡು ಬಂದು ''ಏಯ್, ಟೀ ಮಾಡಿಲ್ವೇನೇ''...ಎಂದು ಕೂಗಿಕೊಂಡಾಗ ಟೀಯ ಬಿಸಿ ಪಾತ್ರೆಯನ್ನು ಕೆಳಗಿಳಿಸಿ ಕೂಗಿ ಹೇಳ್ತಾಳೆ ಬಂದೇ ರೀ, ಟೀ ತರ್‍ತಾ ಇದೀನಿ'' ಎಂದು ಬಿಸಿ ಬಿಸಿ ಟೀ ಕಪ್ ಗಂಡನ ಕೈಗೆ ನೀಡುತ್ತಿರುವಾಗಲೇ ಅವಳಿಗೆ ರೇಷನ್ ಕಾಡ್‌ನ ನೆನಪು ಬಂತು. ಆಗ ಅವಳು ಗಂಡನಿಗೆ ''ರೀ ರೇಷನ್‌ಕಾರ್ಡ್ ಮಾಡಿಸೋಕ್ಕೆ ಆಹಾರ ಇಲಾಖೆ ಆಫೀಸ್‌ಗೆ ಹೋಗಿದ್ದೆ. ಅಲ್ಲಿ ಇವತ್ತು ಆ ಸೆಕ್ಷನ್ ಆಫೀಸರ್ ಬಂದಿರಲಿಲ್ಲ. ನಾಳೆ ಬರ್‍ತಾರೆ ರೀ'' ಎಂದು ಹೇಳಿದಳು. ಈ ಮಾತು ಕೇಳಿದ ತಕ್ಷಣ ಅವಳ ಗಂಡ ಕಾಳಿಂಗರಾಯ ಕೆಂಡಕಾರಿ ''ಏನದು? ಈ ಮನೇಗೆ ಯಜಮಾನ ನಾನಿರೋವಾಗ ಏನದು ನಿಂದರ್ಪ? ನೀನ್ಯಾವೋಳೆ ಇದೆಲ್ಲ ಯಜಮಾನಿಕೆ ಮಾಡೋಕೆ? ನಾನೇ ಮಾಡ್ತೀನಿ ಸುಮ್ನೆ ಇರು. ಏನೋ ರೇಷನ್ ಕಾರ್ಡ್‌ನ್ನು ಇವಳೆ ಹೋಗಿ ಮಾಡಿಸ್ತಾಳಂತೆ. ಈ ಮನೆಗೆ ಯಜಮಾನ ನಾನು. ನಾನು ಇರೋವಾಗ ನೀನೇನು ಬೀದಿ ತಿರುಗೋದು'' ಅಂತ ಹೇಳಿ ಚಪಾದ ಕಪ್ಪನ್ನು ಕೆಳಕ್ಕೆ ಕುಕ್ಕಿ ಇಟ್ಟ. ಇದನ್ನ ಕೇಳಿದ ಸುಶೀಲೆ ''ಅಲ್ಲ ರೀ, ನೀವು ಮಾಡಿಸೋಕೆ ನಿಮ್ಮ ಕೆಲಸದ ಒತ್ತಡದಲ್ಲಿ ಈ ಕೆಲಸ ಎಲ್ಲಿ ಆಗುತ್ತೆ. ಅದಕ್ಕೆ ನಾನು ಹೋದ್ರೆ ಏನು ತಪ್ಪ'' ? ಅಂತ ಹೇಳಿದ್ಲು.

ತಪ್ಪಾ, ಎಷ್ಟೇ ಪೊಗರು ನಿಂಗೆ, ನನ್ ಪರ್ಮಿಷನ್ ಇಲ್ದೆ ರೇಷನ್ ಕಾರ್ಡ್‌ಗೆ ಅಪ್ಲಿಕೇಶನ್ ತೊಗೊಂಡು ಹೋಗಿದ್ದೆಯಲ್ಲ, ಬೀದಿ ಬಸವಿ ಥರ, ಗಂಡುಬೀರಿ. ಒಂದೆರಡು ದಿನ ಇಬ್ಬರೂ ಮೌನ, ಮಾತಿಲ್ಲ ಕಥೆ ಇಲ್ಲ. ಮಾರನೆ ದಿನ ಮಧ್ಯಾನ್ಹ 4-30 ಕ್ಕೆ ಮನೆಗೆ ಬಂದೊಡನೆ ತನ್ನ ಕರೀ ಕೋಟಿನ ಜೇಬಿನಿಂದ ಹೊರತೆಗೆದು ಟಪ್ಪನೆ ಟೇಬಲ್ ಮೇಲೆ ಹಾಕಿದ ಶಬ್ದವೇನೆಂದು ಒಳಗಿದ್ದ ಸುಶೀಲ ಹೊರಗೆ ಬಂದು ನೋಡಿದಾಗ ಟೇಬಲ್ ಮೇಲೆ ಅವಳಿಗೆ ಕಂಡದ್ದು ನೀಲಿ ಬಣ್ಣದ ರೇಶನ್ ಕಾರ್ಡ್. ತಕ್ಷಣ ಅವಳು ಕೈಗೆತ್ತಿಕೊಂಡು ಪುಟಗಳನ್ನು ತಿರುಗಿಸಲು ಅವಳಿಗಾದ ಆಶ್ಚರ್ಯ ಎಂದರೆ ತನ್ನ ಗಂಡನ ಹೆಸರು (1) ಕಾಳಿಂಗರಾಯ ಹಾಳುಮನಿ, (2) ಅಕ್ಷಯ ಹಾಳುಮನಿ-ಹೆಂಡತಿ (3) ಮಾಧವರಾಯ ಹಾಳುಮನಿ - ತಂದೆ (4) ಚೌಡೇಶ್ವರಿ ಹಾಳುಮನಿ. ಎಂದು ಬರೆದಿತ್ತು. ಇದು ಕೇವಲ ಕೌಟಂಬಿಕ ಬಳಕೆಗಷ್ಟೇ ತನ್ನ ಹೆಸರನ್ನು ಅಕ್ಷಯ ಹಾಳುಮನಿ ಎಂದು ಬದಲಾಯಿಸಿದ್ದು ಎಂದು ಮನಸ್ಸಿನಲ್ಲೇ ಯೋಚಿಸಿಕೊಂಡು ಅಯ್ಯೋ ಇದೇನ್ರಿ, ನೀವು ನನ್ನ ಹೆಸರನ್ನು ಅಕ್ಷಯ ಅಂತ ಸುಮ್ಮನೆ ಕರೆಯೋಕೆ ಮಾತ್ರ ಅಂತ ಹೇಳ್ಬಿಟ್ಟು ಈಗ ನೋಡಿದ್ರೆ ರೇಶನ್ ಕಾರ್ಡ್‌ನಲ್ಲೂ ಹಾಗೆ ಬರೆಸಿದೀರಲ್ಲ. ಇದು ದಾಖಲಾತಿಯಾಗದೇ ಬಳಸಿದಂತಾಗಿ, ತಪ್ಪಾಗುವುದಿಲ್ಲವೇ, ಅದೂ ಅಲ್ಲದೆ, ನನ್ನ ಹೆಸರನ್ನು ನನ್ನ ಹೆತ್ತ ತಂದೆ ತಾಯಿಯವರು ಸುಶೀಲ ಅಂತ ಇಟ್ಟು ನನ್ನ 1ನೇ ಕ್ಲಾಸ್‌ಗೆ ಸೇರಿಸೋದರಿಂದ ಹಿಡಿದು, ಇಲ್ಲಿಯವರೆಗೆ ಎಲ್ಲ ಕಡೇಲೂ ಸುಶೀಲ ಅಂತನೇ ಇದೆ. ಅಂಥದರಲ್ಲಿ ನೀವು ಅದ್ ಹೇಗೆ ಇದ್ದಕ್ಕಿದ್ದ ಹಾಗೆ ಚೇಂಜ್ ಮಾಡ್ತೀರ? ಅಂತ ಸ್ವಲ್ಪ ಬಿರುಸಾಗಿಯೇ ಕೇಳಿದಳು. ಅದಕ್ಕೆ ಕಾಳಿಂಗರಾಯ - ಹೆಸರಿಗೆ

ತಕ್ಕಂತೆ ಕೋಪದಿಂದ ಭುಸುಗುಟ್ಟುತ್ತ "ಹೌದು ಕಣೇ, ನಾನು ನಿನ್ನ ಹೆಸರನ್ನು ಏನು ಬೇಕಾದ್ರು ಇಡತೀನಿ, ನನಗಿಷ್ಟವಾದ, ನನ್ನ ತಂದೆ ತಾಯಿಯವರು ಒಪ್ಪಿದ ಹೆಸರನ್ನು ಇಡೋಕೆ ನಾನು ನಿನ್ನ ಗಂಡ ಅದನ್ನು ಯಾರೂ ಕೇಳೋಕಾಗಲ್ಲ. ಹಾಗೇ ಯಾವೋನಾದ್ರೂ ಕಿರೀಕ್ ಮಾಡಿದ್ರೆ ಅವತ್ತೇ ಹೋಗಿ, ನಿನ್ನ ಹೆಸರನ್ನು ಚೇಂಜ್ ಮಾಡಿಸಿ ಗೆಜೆಟ್‌ನಲ್ಲಿ ಹಾಕಿಸಿ, ಅಫಿಡವಿಟ್ ಮಾಡಿಸಿ ಯಾವೋನ್ ಕೇಳ್ತಾನೋ ಅವನ ಮುಖದಮೇಲೆ ಎಸೀತೀನಿ. ನೀನು ಈ..................ಮುಚ್ಕೊಂಡು ಬಿದ್ದಿರು" ಅಂತ ಕೂಗಾಡಿದ. ಸುಶೀಲೆಗೆ ಈ ಧಾಟಿಯ ಮಾತುಗಳು ಎಷ್ಟೋ ರೂಢಿಯಾಗಿದ್ದರೂ ಇದು ತನ್ನ ವ್ಯಕ್ತಿತ್ವ ಮತ್ತು ತನ್ನತನವನ್ನು ಪ್ರಶ್ನಿಸುವಂತೆ ಅನಿಸಿತು. ಅಲ್ಲದೆ ಮದುವೆಗೆ ಮುಂಚೆ ಆಕೆ ಸ್ವಾವಲಂಬಿ, ಚುರುಕು ಬುದ್ಧಿ ಹಾಗು ಸೌಮ್ಯ ಸ್ವಭಾವದವಳು. ತನ್ನ ವ್ಯಕ್ತಿತ್ವಕ್ಕೆ ಮದುವೆನಂತರ ಧಕ್ಕೆಯುಂಟಾದಾಗ ಅವಳಿಗೆ ತನ್ನ ಸ್ವಾತಂತ್ರ್ಯದ ಹೋರಾಟದ ಅನುಭವಗಳು ನೆನಪಿಗೆ ಬಂದಿತು. ಇದೇನು, ನಾನು ಒಬ್ಬ ಹೆಣ್ಣು ಎಂಬ ಕಾರಣಕ್ಕೆ ತನ್ನ ಹೆಸರನ್ನು, ತನ್ನತನವನ್ನು ಈ ಗಂಡನಾದವನು ಬದಲಾಯಿಸುವುದೇ ? ಹೆಂಡತಿಯಾದವಳು ತನ್ನ ಸ್ವಇಚ್ಛೆಯಿಂದ ಪತಿಯ ಹೆಸರನ್ನೋ ಅಥವಾ ಪತಿಯ ಮನೆತನದ ಹೆಸರನ್ನೋ ತನ್ನ ಹೆಸರ ಮುಂದಕ್ಕೆ ಸೇರಿಸಿಕೊಳ್ಳುವುದು ನಾವು ಇತ್ತೀಚೆಗೆ ಕಾಣುತ್ತೇವೆ. ಆದರೆ ಅವಳು ಈಗ ತನ್ನ ಗಂಡನ ಬಲವಂತದಿಂದ ಒಪ್ಪಿಕೊಳ್ಳುವಂತಾಗಿದೆ. ಇದು ಒಂದು ಥರಹ ದಬ್ಬಾಳಿಕೆಯಲ್ಲವೇ ? ತನ್ನ ಸರ್ವಸ್ವವನ್ನು ತನ್ನ ಗಂಡ ಮಕ್ಕಳಿಗಾಗಿ ಧಾರೆ ಎರೆದ ಮೇಲೆ ಬರೀ ಹೆಸರಿನಲ್ಲೇನಿದೆ ಎಂದು ಎಷ್ಟೇ ವಾದ ಮಾಡಿದರೂ ಅದು ಅವಳ ಮನಸ್ಸಿನಿಂದ ಒಪ್ಪಿ ಸ್ವತಃ ತನ್ನ ಹೆಸರನ್ನು ಬದಲಾಯಿಸಿಕೊಳ್ಳುವಷ್ಟು ತನ್ನ ಗಂಡನನ್ನು, ಗಂಡನ ಮನೆ, ಮನೆತನವನ್ನು ಪ್ರೀತಿಸುತ್ತಿದ್ದರೆ ಮಾತ್ರ ಅದಕ್ಕೆ ಅರ್ಥವಿರುತ್ತೆ. ಅದೂ ಅಲ್ಲದೆ ನ್ಯಾಯ ಸಮ್ಮತವಾಗಿ ಕಾನೂನು ರೀತ್ಯ ಅವಳ ಹೆಸರನ್ನ ಬದಲಾಯಿಸಿದಲ್ಲಿ ದಾಖಲೆಗಳ ನೊಂದಾವಣೆಗೆ ಅದು ಪೂರಕವಾಗುತ್ತದೆಯೇ ಹೊರತು, ಕೇವಲ ಕರೆಯುವುದಕ್ಕಾದರೆ ಆಲಿಯಾಸ್, ಉರುಫ್ ಎಂದು ಬಳಸುವುದು ವಾಡಿಕೆ. ಈ ವಾದಕ್ಕೆ ಅವಳ ಗಂಡ ಸ್ವತಃ ಲಾಯರ್ ಆಗಿದ್ದರಿಂದ ಮಾತಿನ ವಾಗ್ವಾದದಲ್ಲಿ ಸೋಲು ಆಕೆಯದೇ. ಏಕೆಂದರೆ, ಜಗಳ ಕೇವಲ ಜಗಳವಾಗದೆ, ಅಕ್ಕ ಪಕ್ಕದ ಮನೆಯವರಿಗೆ ಕೇಳಿ ಮನೆಯಿಂದ ಹೊರ ನಡೆದಾಗ ಅವರುಗಳ ಪ್ರಶ್ನಾರ್ಥಕ ನೋಟವನ್ನು ಎದುರಿಸುವುದು ಅವಳಿಗೆ ಬಹಳ ಕಷ್ಟ. ಆದರೂ ಉದ್ಯೋಗಸ್ಥೆ, ವಿದ್ಯಾವಂತೆ, ಸುಶಿಕ್ಷಿತೆಯೂ, ಆದ ತನ್ನ ಸ್ವಂತಿಕೆಯನ್ನು ಮೆಟ್ಟಿನಿಲ್ಲುವುದರಲ್ಲಿ ಪುರುಷನ ದರ್ಪ, ಅಹಂಕಾರಕ್ಕೆ ಒಂದು ಮಾರ್ಗ ಎಂದು ಮನದಲ್ಲೇ ಕೆಂಡಕಾರಿದಳು. ಆದರೂ ಕೋಪವನ್ನು ಮನದಲ್ಲೇ ಅದುಮಿಟ್ಟುಕೊಂಡು, ರೂಮಿನತ್ತ ನಡೆದಳು.

ಬೆಡ್‌ರೂಮಿನ ಮೂಲೆಯಲ್ಲಿ ಪುಸ್ತಕಗಳ ಮೇಲೆ ಏನೋ ಹೊಸದಾಗಿ ಕಾಣಿಸಿತು. ಏನೆಂದು ಕೈಗೆ ತೆಗೆದುಕೊಂಡು ನೋಡಿದಾಗ ಅದು ಮಾರನೆ ದಿನಕ್ಕೆ ಬಿಜಾಪುರಕ್ಕೆ ಪ್ರಯಾಣ ಮಾಡಲು ಟ್ರೇನ್ ಟಿಕೆಟ್. ಎರಡೂ ಟಿಕೆಟ್‌ಗಳನ್ನು ಓದಿ ನೋಡಿದಳು. ಮೇಲ್ -39 ವರ್ಷ, ಫಿಮೇಲ್ -30 ವರ್ಷ ಎಂದಿತ್ತು. ಟಿಕೆಟ್‌ಗಳನ್ನು ಅಲ್ಲೇ ಇಟ್ಟು ಪ್ರಯಣಕ್ಕೆ ಬಟ್ಟೆ ಬರೆಗಳನ್ನು ಮಡಚಿ ಸೂಟ್‌ಕೇಸ್‌ನ ಒಳಗೆ ಜೋಡಿಸಲು ಪ್ರಾರಂಭಿಸಿದಳು. ಪ್ರತಿಯೊಂದು ಹಬ್ಬಕ್ಕೂ ಅತ್ತೆ ಮನೆಗೆ ಕಡೆಯ ಪಕ್ಷ 10-15 ದಿನಗಳ ರಜೆ , ರಜೆ ಕೇಳುವಾಗ ಆಫೀಸರ್ ಮುಂದೆ ಎಲ್ಲಿಲ್ಲದ ಮುಜುಗರ. ಶ್ರದ್ದೆಯಿಂದ ಕೆಲಸ ಮಾಡುವುದಕ್ಕೆ ಒಳ್ಳೆಯ ಹೆಸರು ತೆಗೆದುಕೊಂಡಿದ್ದ ತನಗೆ ಮದುವೆಯ ನಂತರ ಇಷ್ಟೊಂದು ರಜೆ ಕೇಳಬೇಕಾದರೆ ಅದೆಷ್ಟು ಮುಜುಗರ; ತನ್ನ ಸಹೋದ್ಯೋಗಿಗಳ ಸಹಕಾರದಿಂದ ಹೇಗೋ ಬಚಾವ್ ಆಗ್ತಾ ಇದ್ದಳು. ಕಡೆಗೆ ನಿನ್ನ ಕೆಲಸ ಯಾವ ಮಹಾ, ಚಪ್ರಾಸಿ ಕೆಲಸ, ನಿನ್ನ ಥರ ಹತ್ತಾರು ಜನ ಯಾಕೆ ನಿಮ್ಮ Chief Accounts Officer ರೇ ನನಗೆ ಸೆಲ್ಯೂಟ್ ಹೊಡೀತಾನೆ. ನಿಮ್ಮ ಅಪ್ಪ, ಅಣ್ಣ ಪೊಲೀಸ್ ಆಫೀಸರ್ ಆದ್ರೆ, ಡಿ.ಐ.ಜಿ.ನೇ ಬಂದು ನನ್ಮುಂದೆ ನಿತ್ಕೊಂಡು ಕೈಮುಗಿದು ಕಾಲು ಹಿಡ್ಕೊತಾನೆ. ಅಂತದ್ರಲ್ಲಿ ನಿಂದೇನು ಮಹಾ, ಇತ್ಯಾದಿ.....

ಮಾರನೆದಿನ : ಬಟ್ಟೆಯೆಲ್ಲ ಸೂಟ್‌ಕೇಸ್‌ಗೆ ಹಾಕಿ ಪ್ಯಾಕಿಂಗ್ ಆಯ್ತು, ಇನ್ನೇನು ಊಟಮಾಡಿ ಬಾಗಿಲು ಬೀಗಹಾಕ್ಕೊಂಡು ಹೊರಡೋದು ಎಂದು ಸುಶೀಲೆ ಬೇಗ ಬೇಗನೆ ತಯಾರಾದಳು. ರಾತ್ರಿ 9-00 ಗಂಟೆಗೆ ಟ್ರೈನ್ ಹೊರಡುವುದು-ಬಿಜಾಪುರಕ್ಕೆ. ಸಂಜೆ 7-30ಕ್ಕೆ ಹೊರಡಲು ರೆಡಿಯಾಗಿ, ಆಟೋರಿಕ್ಷಾ ಬಂದು ನಿಲ್ಲುವುದೆಂದರೆ, ಆಕೆಗೆ ಮಾಮೂಲಾದ ವಿಷಯ. ಹೊರಡುವ ವೇಳೆಗೆ ಗಂಡನ ಮುಖಭಾವ, ಚಲನ ವಲನ ಎಲ್ಲವು ಬದಲಾಗಿವೆ. ಮಾನಸಿಕವಾಗಿ ಅವನು ತನ್ನ ತಂದೆ, ತಾಯಿ ಬಂಧುಗಳ ಸಪೋರ್ಟ್‌ನ್ನು ತೆಗೆದುಕೊಂಡು ಆಕೆಯನ್ನು ಪೂರ್ಣವಾಗಿ ಪರಕೀಯಳಂತೆ ನೋಡುವುದು ಪ್ರಾರಂಭವಾಗಿದೆ.

ಇಬ್ಬರು ದಾಪುಗಾಲು ಹಾಕುತ್ತಾ ರೈಲ್ವೇ ನಿಲ್ದಾಣವನ್ನು ತಲುಪಿದರು. ಸುಶೀಲೆ ಎರಡೂ ಕೈಗಳಲ್ಲಿ ಬ್ಯಾಗ್ ಮತ್ತು ಸೂಟ್‌ಕೇಸ್‌ಗಳನ್ನು ಹೊತ್ತುಕೊಂಡು ಬಿರಬಿರನೆ ಹೆಜ್ಜೆಹಾಕುತ್ತಿದ್ದಾಳೆ. ಸೀರೆಯ ನೆರಿಗೆ ಸ್ವಲ್ಪ ಕೆಳಗಿದ್ದು, ಆಗಾಗ ತಾನೇ ಮೆಟ್ಟಿದಾಗ ಥೂ ಹಾಳಾದ್ದು ಚೂಡಿದಾರ ಹಾಕಿಕೊಳ್ಳೋಣ ಅಂದರೆ ಮನೆ ಸಂಪ್ರದಾಯ, ಪದ್ಧತಿ....ಹೆಂಗಸ್ರು ಮೈ ಮುಚ್ಚಿಕೊಳ್ಳೋದು ಇವರ ಪದ್ಧತಿಯಲ್ಲ. ಸೆರಗು ಜಾರುತ್ತಿದ್ದರೂ ಪರವಾಗಿಲ್ಲ, ಸೀರೆಯೇ ಸ್ತ್ರೀಯರಿಗೆ ಶ್ರೇಷ್ಠವಾದ ಉಡುಗೆ ಅನ್ನೋ ವಾದ, ವಾಡಿಕೆ. ಇವರುಗಳ ಮೂಢನಂಬಿಕೆಗಿಷ್ಟು ಬೆಂಕಿ ಹಚ್ಚು, ಹಣೆಯ ಮೇಲಿಂದ ಹರಿದು ಬರುತ್ತಿದ್ದ ಬೆವರು ಹನಿಯನ್ನು ಒರೆಸಿಕೊಳ್ಳೋಕೂ ಕೈ ಬಿಡುವಿಲ್ಲ, ಸಮಯವಿಲ್ಲ. ಕೈಗಳು, ರಟ್ಟೆ ಬ್ಯಾಗುಗಳ ಭಾರಕ್ಕೆ ನೋವಿನಿಂದ ಸೆಳೆಯುತ್ತಿವೆ. ಅಂತೂ ಇಂತೂ ಕಾಳಿಂಗರಾಯನನ್ನೆ ಹಿಂಬಾಲಿಸುತ್ತಾ ಜನಜಂಗುಳಿಯಲ್ಲಿ ತಮ್ಮ ರೈಲಿನ ನಿಗದಿತ ಸೀಟನ್ನು ಹುಡುಕಲು ಬೋಗಿಗಳ ನಂಬರನ್ನು ಓದುತ್ತಾ ಬಂದಾಗ, ''ಅಬ್ಬಾ! ಸಿಕ್ಕಿತು ನಮ್ಮ ಬೋಗಿ. ಬಾಗಿಲು ಬಳಿ ತಮ್ಮ ಸೀಟನ್ನು ಖಾತ್ರಿಮಾಡಿಕೊಂಡು ಒಳಗೆ ಕುಳಿತುಕೊಳ್ಳಲು ಜನರ ನುಗ್ಗಾಟ. ಸೂಟ್‌ಕೇಸ್, ಬ್ಯಾಗುಗಳ, ಹಣದ ಪರ್ಸಿನ ಜೋಪಾನ ಒಂದು ಕಡೆ, ಮೈಮೇಲೆ ಬೀಳಲು ಇದನ್ನೇ ನೆಪಮಾಡಿಕೊಂಡು ಅವಕಾಶವನ್ನು ಉಪಯೋಗಿಸಿಕೊಳ್ಳುವ ಪೋಲಿ ಗಂಡಸರ ಕಾಟ ಒಂದು ಕಡೆ, ಟ್ರೇನನ್ನು ಮಿಸ್ ಮಾಡಿಕೊಳ್ಳದಿರುವ ಆತಂಕ ಒಂದು ಕಡೆ. ಈ ಎಲ್ಲ ಆತಂಕಗಳಿಂದ ತನ್ನ ಮತ್ತು ಕಾಳಿಂಗ ಸರ್ಪ (ಕಾಳಿಂಗ ರಾಯನ) ಹೆಸರನ್ನು ಬೋಗಿಯ ಮೇಲೆ ಅಂಟಿಸಲಾಗಿದ್ದ ಹೆಸರು, ವಯಸ್ಸು ಮತ್ತು ಸೀಟಿನ ಸಂಖ್ಯೆಯ ಪಟ್ಟಿಯನ್ನು ವೀಕ್ಷಿಸುತ್ತಿರುವಾಗ ಸುಶೀಲೆಗೆ ತನ್ನ ಹೆಸರೇ ಸಿಗಲಿಲ್ಲ. ಎರಡು ಬಾರಿ ಪಟ್ಟಿಯನ್ನು ಓದಿದರೂ ಸಿಗಲಿಲ್ಲ ತನ್ನ ಹೆಸರು! ಅತ್ಯಂತ ತವಕದಿಂದ ಆಕೆ ''ಇದೇನ್ರಿ ನಿಮ್ಮ ಹೆಸರು ಮಾತ್ರ ಇದೆ, ನನ್ನ ಹೆಸರೇ ಹಾಕಿಲ್ಲ'' ಎಂದಾಗ ಆಗಲೇ ಬೋಗಿಯ ಮೆಟ್ಟಿಲನ್ನೇರಲು ಹೊರಡುತ್ತಿದ್ದ ಪತಿಯನ್ನು ಕೂಗಿದಾಗ ಆತ ಅಲ್ಲೇ ಕಾಣ್ತಾ ಇಲ್ವಾ ನನ್ನ ಹೆಸರಾದ ಮೇಲೆ ಅಕ್ಷಯ ಹಾಳುಮನಿ ನಂ. 25, ಕಣ್ಣು ಬಿಟ್ಕೊಂಡು ಸರಿಯಾಗಿ ಓದು ಎಂದು ಹೇಳುತ್ತ ಮೆಟ್ಟಿಲನ್ನೇರಲು ಮುಂದುವರಿಸಿ, ಬೇಗ ಹತ್ತು, ಗಾಡಿ ಹೊರಡುತ್ತೆ ಎಂದು ಹೇಳಿ ಗಾಡಿಯ ಒಳಗೆ ಹೋದಾಗ, ಅವಳ ಮನಸ್ಸು ತನ್ನ ಹೆಸರ ಬದಲಾವಣೆ-ತನ್ನ ಮೇಲೆ ಆತನ ಹಕ್ಕು ಚಲಾಯಿಸುವಿಕೆ ಆಕೆಯನ್ನು ಮತ್ತಷ್ಟು ಕೆರಳಿಸಿತು. ಒಂದು ನಿಮಿಷ ಕೋಪವನ್ನು ತಡೆದುಕೊಂಡು, ಮಾತನಾಡದೇ ಅವನನ್ನೆ ಹಿಂಬಾಲಿಸಿದಳು. ಸುತ್ತಲು ಸಹ ಪ್ರಯಾಣಿಕರು ಅವರವರ ಲಗ್ಗೇಜ್‌ಗಳ ಭದ್ರತೆಗೆ ಪರದಾಡುತ್ತಿದ್ದರು. ಹೆಂಗಸರು, ಮಕ್ಕಳು, ಮುದುಕರು ಕೆಳ ಬರ್ತ್‌ಗಾಗಿ ಪಕ್ಕದಲ್ಲಿದ್ದ ಯುವಕರ ಮೊರೆ ಹೋಗುತ್ತಿದ್ದಾರೆ. ಈ ಗದ್ದಲದಲ್ಲಿ ತನ್ನ ಸ್ತ್ರೀಸ್ವಾತಂತ್ರ್ಯದ ಹೋರಾಟ ಮನಸ್ಸಿನಲ್ಲೇ ಹೊಗೆಯಾಡಲು ಪ್ರಾರಂಭಿಸುತ್ತಿದ್ದಂತೆ, ರೈಲು ಗಾಡಿಯೂ ಸಹ ಜೋರಾಗಿ ಹಾರ್ನ್ ಮಾಡುತ್ತಾ, ದಟ್ಟವಾದ ಹೊಗೆಯನ್ನು ಸ್ವಲ್ಪ ಸ್ವಲ್ಪವಾಗಿ ಉಗುಳಲು ಪ್ರಾರಂಭಿಸಿತು. ಸುಶೀಲೆ ಈ ಜೀವನದ ಪ್ರಯಾಣದಲ್ಲಿ ಗುರಿಮುಟ್ಟುವಳೋ ಅಥವ ಅನೇಕ ಮಹಿಳೆಯರಂತೆ ಪತಿಗೆ ತಕ್ಕ ಸತಿಯೆಂದು ನೋಡುವವರ ಕಣ್ಣಿಗೆ ಪತಿವ್ರತಾ ಶಿರೋಮಣಿಯೆಂದು ಹೆಸರು ಪಡೆದು ಕೊನೆಯುಸಿರೆಳೆಯುತ್ತಾಳೋ ಗುರಿ ತಲುಪಿದ ಮೇಲೆ ತಿಳಿಯುತ್ತದೆ.

- ಕೆ. ವತ್ಸಲಾ

# ಕಗ್ಗೊಲೆಯ ಅಂಗಳದಲ್ಲಿ ಒಂದು ದಿನದ ಮೌನ...

ನಾಗಲಾಪಲ್ಲಿಯಲ್ಲಿ ಯಶೋದಮ್ಮ ಮತ್ತವಳ ಮಕ್ಕಳ ಹತ್ಯೆ ನಡೆದು ಜೂನ್ 26 ಕ್ಕೆ 2 ತಿಂಗಳು ತುಂಬಿದ ಸಂದರ್ಭದಲ್ಲಿ ನಾಗಲಾಪಲ್ಲಿಯ ಯಶೋದಮ್ಮನ ಮನೆಯ ಅಂಗಳದಲ್ಲಿ ನಡೆದ ಮೌನ ಆಚರಣೆಗೆ ಕರೆ ನೀಡಲು ''ದಲೇಕ'' ದವರು ತಯಾರಿಸಿದ ಬರಹ

ಇಕ್ಕಡ ಯಶೋದವ್ಮ ರಗುತವು, ಇದಿ ಚಂದ್ರಶೇಖರ್‌ದಿ,........... ಈ ರಕ್ತಮು ದಿನೇಶ್ ದಿ

(ಇಲ್ಲಿ ಯಶೋದಮ್ಮನ ರಕ್ತ, ಇದು ಚಂದ್ರಶೇಖರ್‌ನದು..... ಈ ರಕ್ತ ದಿನೇಶ್‌ನದು)

ಹೀಗೆ ಹತ್ಯಾಕಾಂಡದಲ್ಲಿ ತಂಗಿ ಮತ್ತು ಆಕೆಯ ಇಬ್ಬರು ಮಕ್ಕಳನ್ನು ಕಳೆದುಕೊಂಡಿರುವ ಅಣ್ಣ ಮುನಿಯಪ್ಪನ ರೋದನ ಸಾಗಿದೆ. ಕೊಲೆಯಾಗಿ ತಿಂಗಳ ಮೇಲಾಗಿದ್ದರು, ಮಳೆ ರಕ್ತವನ್ನು ತೊಳೆದು ಹಾಕಿದ್ದರೂ, ಗಾಳಿ ಕೊಲೆಯಾದವರ ಆರ್ತನಾದ ಹೊತ್ತು ಹೋಗಿದ್ದರೂ ಮುನಿಯಪ್ಪನ ಕಣ್ಣಿಗೆ ಅಲ್ಲಿ ಇನ್ನೂ ರಕ್ತ, ಮೂಗಿಗೆ ರಕ್ತದ ವಾಸನೆ, ಕಿವಿಗೆ ಸತ್ತವರ ಆರ್ತನಾದ ಕೇಳಿಸುತ್ತಿದೆ. ದಲಿತ ಬರಹಗಾರರೆನಿಸಿಕೊಂಡ ನಾವು ನಾಗಲಾಪಲ್ಲಿಯಲ್ಲಿ ಕಳೆದ ಏಪ್ರಿಲ್ 26 ರಂದು ನಡೆದುಹೋದ ಕಗ್ಗೊಲೆಯ ಅಂಗಳದಲ್ಲಿ ನಿಂತಿದ್ದೇವೆ. ಮುನಿಯಪ್ಪ ಅಂಗಳದ ನೆಲ ಮುಟ್ಟಿ ತನಗೆ ಕಾಣಿಸುವುದನ್ನು ನಮಗೆ ಮುಟ್ಟಿಸಲು ಹೆಣಗುತ್ತಿದ್ದಾನೆ. ಆದರೂ ಆ ಕಗ್ಗೊಲೆಯ ಚಿತ್ರ ಕಣ್ಣಿಗೆ ಕಟ್ಟಿಕೊಳ್ಳುವಲ್ಲಿ ನಾವು ಸೋಲುತ್ತಿದ್ದೇವೆ. ದಲಿತ ಸಂಘರ್ಷ ಸಮಿತಿಯ ಹೆಜ್ಜೆಗಳೊಂದಿಗೆ ಹೆಜ್ಜೆ ಹಾಕಿ ನಡೆದು ಬಂದಿರುವ ನಮ್ಮ ನಡಿಗೆ ಕುಸಿಯುತ್ತಿದೆ.

ನಮ್ಮ ಮನಸ್ಸುಗಳಂತೆಯೇ ದಾಳಿಗೀಡಾಗಿ ಜಖಂಗೊಂಡಿರುವ ಯಶೋದಮ್ಮನ ಎರಡಂಕಣದ ಹೆಂಚಿನ ಮನೆಯ ಒಳಗೆ ನಾವಿದ್ದೇವೆ. ದಾಳಿಕೋರರು ಹೆಂಚು ಇಳಿಸಿ ಒಳಗೆ ನುಗ್ಗಿದ್ದ ಕಿಂಡಿಗಳನ್ನು ಈಗ ಮುಚ್ಚಲಾಗಿದೆ. ಆದರೂ ಕಿಂಡಿಗಳ ಮೂಲಕ ಸೋರಿ ಬರುವ ಬೆಳಕಿನಲ್ಲಿ ಮುಚ್ಚಿಹೋದ ವಿವರಗಳು ತೆರೆದುಕೊಳ್ಳುತ್ತಿವೆ. ಒಡೆದ ಹೆಂಚಿನ ಚೂರುಗಳು, ಅಡಿಗೆ ಮನೆಯ ಹೊಗೆ ಗೂಡಿನ ಪಕ್ಕದ ಮಡಿಕೆ ಸಾಲು, ಜಂತೆಗೆ ನೇತು ಹಾಕಿದ ಈರುಳ್ಳಿಗುಚ್ಛಗಳು, ನಡುಮನೆಯ ಗೋಡೆಯ ಮೇಲಿನ ಎರಡು ಮಣ್ಣಿನ ಜಿಂಕೆಯ ಮುಖಗಳು ಅವುಗಳಲ್ಲಿ ಒಂದರ ಕೋಡು ಮುರಿದು ಹೋಗಿದೆ. ಗುಡಿಸದೆ ಹಾಗೆ ಬಿಟ್ಟ ನೆಲದಲ್ಲಿ, ಗೋಡೆಯ ಮೇಲೆ ಒಳಗೆ ನುಗ್ಗಿ ಬಡಿದು ಬೀದಿನಾಯಿಗಳನ್ನು ಎಳೆದೊಯ್ದಂತೆ ಎಳೆದೊಯ್ದಿರುವುದರ ಮಾಸಿಯೂ ಮಾಸದ ಕುರುಹುಗಳು....

ನಾವು ಮೂರು ಮಣ್ಣಿನ ಸಮಾಧಿಗಳ ಮುಂದೆ ನಿಂತಿದ್ದೇವೆ. ತಾಯಿಯೊಬ್ಬಳು ತನ್ನ ಇಬ್ಬರು ಮಕ್ಕಳನ್ನು ತೆಕ್ಕೆಯಲ್ಲಿ ತಬ್ಬಿ ಮಲಗಿರುವಂತೆ ಮಲಗಿದ್ದಾಳೆ. ಮುನಿಯಪ್ಪ ಸಮಾಧಿಗಳನ್ನು ತಬ್ಬಿ ರೋಧಿಸುತ್ತಿದ್ದಾನೆ. ತನ್ನ ಕ್ಯಾನ್ಸರ್ ಹುಣ್ಣಿನ ವಾಸನೆ ನಮಗೆ ತಟ್ಟಬಾರದೆಂದು ಸೆರಗಿನಲ್ಲಿ ಮುಖ ಮುಚ್ಚಿಕೊಂಡು ಕೊಲೆಯಾದ ಯಶೋದಮ್ಮನ ತಂಗಿ ಮಾರು ದೂರದಲ್ಲಿ ಕುಕ್ಕರಗಾಲಲ್ಲಿ ಕುಸಿದು ಅಳುತ್ತಿದ್ದಾಳೆ. ಆಕೆಯ ಆ ಕ್ಷೀಣರೋಧನ ನಮ್ಮ ದನ್ನಿರಲಿ ಗಾಳಿಯ ಎದೆಯನ್ನೇ ಸೀಳಿಹಾಕುತ್ತಿದೆ. ನಮ್ಮ ಜೊತೆಗಿದ್ದ ಸಿ.ಎಂ. ಮುನಿಯಪ್ಪ ''ಆ ಸಬ್ ಇನ್ಸ್‌ಪೆಕ್ಟರ್ ಜೆಸಿಬಿಯಂತ್ರ ತರಿಸಿ ತೋಡಿಸಿರೋ ಗುಳಿಗಳು, ಮೂರು ಜನರಿಗೆ ಒಂದೇ ಗುಳಿ ತೋಡಿಸಿದ್ದ... ಡಿಎಸ್‌ಎಸ್ ಗಲಾಟೆ ಮಾಡಿದ ಮೇಲೇನೆ ಗುಳಿ ಬೇರೆ ಬೇರೆ ಆಗಿದ್ದು.. ಎನ್ನುತ್ತಾರೆ''. ಕವಿಯತ್ರಿ ಸರಸ್ವತಿ ಇದನ್ನೆಲ್ಲಾ ನೋಡಲಾಗದೇ ದೂರವೇ ನಿಂತಿದ್ದಾಳೆ. ನಾನೂ ಪಾರ್ಥ ಸಾಲೂಸಾಲದ ಬೇವಿನ ಗಿಡದ ನೆರಳಿಗೆ ನಿಂತಿದ್ದೇವೆ. ನನಗೆ "fake encounter ನಲ್ಲಿ ಸತ್ತವರ ಹೆಣಗಳನ್ನು ಹಿಂತಿರುಗಿಸುವ ಹಕ್ಕನ್ನು ಕೊಡಿ'' ಎಂದು ಹೋರಾಡಿದ ಗದ್ದರ್ ನೆನಪಾಗುತ್ತಾರೆ. ಅದು ಆಂಧ್ರದ ದಲಿತರ ಮಾತಾದರೆ ಇಲ್ಲಿ ಬೇರೆ ಬೇರೆ ಗುಳಿಗಳನ್ನು ತೋಡಿಸಲು ಹೋರಾಡಿದ ದಸಂಸ ಎದುರಿಗಿದೆ. ಗೋವಿಂದಯ್ಯ ''ಕ್ಯಾಮರಾ ತರಬೇಕಿತ್ತು ಕಣೋ'' ಎನ್ನುತ್ತಾನೆ.

ಬಸವರಾಜ್ ಮಾತೇ ಇಲ್ಲದೇ ಬತ್ತಿಹೋಗಿದ್ದಾರೆ. ಯಾರಿಗೂ ಏನೂ ತೋಚದೆ ದಿಕ್ಕೆಟ್ಟು ನಿಂತಿದ್ದೇವೆ. ಕೊನೆಗೆ ಬರುವ ಮೊದಲೇ ಅಂದುಕೊಂಡಿದ್ದನ್ನೆ ಮತ್ತೆ ಒಬ್ಬರಿಗೊಬ್ಬರು ಹೇಳಿಕೊಂಡು ದುಗುಡ ಕಮ್ಮಿ ಮಾಡಿಕೊಳ್ಳಲು ಯತ್ನಿಸುತ್ತೇವೆ. ಇಲ್ಲ... ಕ್ಯಾಮರಾ, ಫೋಟೋ, ಅಪೀಲು, ಮೆಮೊರಾಂಡಮ್, ಪ್ರೆಸ್‌ಸ್ಟೇಟ್‌ಮೆಂಟ್ ಇದ್ಯಾವುದೂ ನಮ್ಮ ಉದ್ದೇಶ ಅಲ್ಲ. ನಾವು ಬಂದಿರೋದು ನಮ್ಮ ಅಂತಸಾಕ್ಷೀನಾ ನಾವೇ ಮುಟ್ಟಿ ನೋಡಿಕೊಳ್ಳೋದಕ್ಕೆ... ನಮ್ಮ ಗ್ರಹಿಕೆ, ಸಂವೇದನೆ ಶಕ್ತೀನ ಪರೀಕ್ಷೆಗೆ ಒಡ್ಡೋದಕ್ಕೆ... ನಮ್ಮ ಕಣ್ಣುಗಳಿಗೆ ನೋಡುವ ಶಕ್ತಿ ಇದ್ದರೆ ನೋಡಲಿ... ಕೇಳಿಸಿಕೊಳ್ಳುವ ಸಾಮರ್ಥ್ಯ ಇದ್ದರೆ ಕೇಳಿಸಿಕೊಳ್ಳಲಿ.... ಲೆಟ್ ಆಸ್ ಫೀಲ್ ದಿ ರಿಯಾಲ್ಟಿ ಎನ್ನುವುದನ್ನೇ ಪುನರುಚ್ಚರಿಸಿಕೊಂಡು ಅದೇ ನಿರ್ಧಾರಕ್ಕೆ ಬರುತ್ತೇವೆ. ಕಗ್ಗೊಲೆಯ ವಿವರಗಳು ಒಂದೊಂದಾಗಿ ಒಳಗಿಳಿಯುತ್ತವೆ.

ಕಳೆದ ಎರಡು ದಶಕಗಳಿಂದ ದಲಿತರ ಮೇಲಾದ ಅನೇಕ ಹಲ್ಲೆ, ಹಿಂಸೆ, ಕೊಲೆ ಪ್ರಕರಣಗಳನ್ನು ನೋಡಿದ್ದೇವೆ. ಎಷ್ಟೋ ನೊಂದವರ ನಿಟ್ಟುಸಿರು ಕೇಳಿಸಿಕೊಂಡಿದ್ದೇವೆ. 1979 ರಲ್ಲಿ ಆದ ಹುಣಸಿಕೋಟೆಯ ಶೇಷಗಿರಿಯಪ್ಪನ ಕೊಲೆ ಕಣ್ಣಲ್ಲಿದೆ; ಬಾಳುಪೇಟೆಯಲ್ಲಿ ಕಡಿದ ಕಾಲುಗಳ ಹೆಜ್ಜೆ ಗುರುತು ಮಾಸಿಲ್ಲ; ದಾಸನಾಪುರದ ಚಿಕ್ಕ ತಿಮ್ಮಯ್ಯನ ದೇಹದ ತುಂಡು ತುಂಡು ಸೇರಿಸಿ ಕಟ್ಟಿದ್ದ ಹಾಡು ನಮ್ಮ ಕಿವಿಯಲ್ಲಿದೆ; ಸಿಗೇಹಳ್ಳಿಯ ಮುನಿಯಪ್ಪನ ಮೈ ಸಿಗಿದಿದ್ದ ನೂರಾರು ಮಚ್ಚಿನ ಏಟುಗಳ ಗುರುತಿದೆ; ಇತ್ತೀಚೆಗೆ ಕಂಬಾಲಪಲ್ಲಿಯಲ್ಲಿ ಸುಟ್ಟು ಹೋದ ದಲಿತರ ಬೂದಿ ಕಣ್ಣು ಮುಂದೆ ಇನ್ನೂ ಹೊಗೆಯಾಡುತ್ತಿದೆ; ಕೊನೆಯದಾಗಿ ಹೆಣ್ಣೊಬ್ಬಳನ್ನು ಬೆತ್ತಲೆ ಮಾಡಿ ಇಡೀ ಊರೇನೋಡಿ ಕೇಕೆ ಹಾಕಿದ ಸವಣೂರಿನ ನೀಚತನದಿಂದ ಇನ್ನೂ ತತ್ತರಿಸುತ್ತಿದ್ದೇವೆ. ಆದರೂ ಈ ಕಗ್ಗೊಲೆ ಇದುವರೆಗಿನ ಇಂಥ ಕ್ರೌರ್ಯಗಳನ್ನೆಲ್ಲ ನಾಚಿಸುವಷ್ಟು ಬರ್ಬರವಾಗಿದೆ. ಊರಿಗೇ ಊರೇ ಒಂದಾಗಿ ಹೆತ್ತ ತಾಯಿಯ ಎದುರೇ ಬೆಳೆದ ಮಕ್ಕಳಿಬ್ಬರನ್ನು ತುಂಡುತುಂಡಾಗಿ ಕೊಚ್ಚಿ ತಾಯಿಗೆ ಮಕ್ಕಳ ಸಾವನ್ನು ಕಾಣಿಸಲಾಗಿದೆ. ಸಾಯುತ್ತಿರುವ ಮಕ್ಕಳ ಕಣ್ಣಿಗೆ ತಾಯಿಯ ಮೊಲೆ ಕತ್ತರಿಸಿ ತೋರಿಸಲಾಗಿದೆ. ಮರ್ಮಾಂಗಕ್ಕೆ ರಿಫೀಸ್ ಪಟ್ಟಿ ತುರುಕಲಾಗಿದೆ....

ಇಂಥ ಬರ್ಬರ ಹತ್ಯೆಗೆ ಕಾರಣ... ಯಶೋದಮ್ಮನ ಸ್ವಾಭಿಮಾನ. ಊರಿನ ಬಲಗಾರರಾದ ರೆಡ್ಡಿಗಳ ಮಾತಿನಂತೆ ತಲೆ ತಗ್ಗಿಸದೆ ಹೋಗಿದ್ದು. ಅವರು ಯಶೋದಮ್ಮನ ಭೂಮಿಯನ್ನು ಮಾರುವಂತೆ ಒತ್ತಾಯಿಸಿದಾಗ ಮಾರಲು ನಿರಾಕರಿಸಿದ್ದು, ಅವರು ನಡೆದಾಡುವ ದಾರಿಗೂ ಅಡ್ಡಿ ಪಡಿಸಿದಾಗ ಸರ್ಕಾರದಿಂದ ಅವರ ಜಮೀನಿನಲ್ಲೇ ರಸ್ತೆಯಾಗುವಂತೆ ಮಾಡಿದ್ದು. ರೆಡ್ಡಿಗಳು ಕೊಟ್ಟ ಹಿಂಸೆ, ಕಿರುಕುಳದ ವಿರುದ್ಧ ಪೋಲಿಸರಿಗೆ ನೂರಾರು ದೂರು ಕೊಟ್ಟಿದ್ದು.....

ನ್ಯಾಯ ಪಕ್ಷಪಾತಿಗಳಾಗಿ ರಕ್ಷಣೆ ಒದಗಿಸಬೇಕಾದ ಪೋಲೀಸರೇ ಮುಂದಾಗಿ ನಿಂತು ಯಶೋದಮ್ಮನಿಗೆ ರಾಜಿಯಾಗುವಂತೆ ಒತ್ತಾಯಿಸಿದ್ದು ಅಲ್ಲದೇ ಆಕೆಗೆ ನೀಡಲಾದ ಪೋಲಿಸು ಬೆಂಗಾವಲನ್ನು ಉದ್ದೇಶಪೂರ್ವಕವಾಗಿ ಹಿಂತೆಗೆದುಕೊಂಡು ಕೊಲೆ ಸುಲಭವಾಗಿ ನಡೆಯುವುದಕ್ಕೆ ತಕ್ಕ ಅನುಕೂಲಗಳನ್ನು ಒದಗಿಸಿದ್ದಾರೆ. ಈ ಕಗ್ಗೊಲೆಗೆ ಎರಡು ದಿನಗಳ ಮೊದಲು ಊರಿಗೆ ಭೇಟಿಕೊಟ್ಟಿದ್ದ ಬೇತಮಂಗಲ ಪೋಲೀಸು ಠಾಣೆಯ ಸಬ್‌ಇನ್ಸಪೆಕ್ಟರ್ ಮುನಿಯಪ್ಪ ಯಶೋದಮ್ಮನಿಗೆ ಜಮೀನನ್ನು ಬಿಟ್ಟುಕೊಟ್ಟು ರಾಜಿಯಾಗುವಂತೆ ಒತ್ತಾಯಿಸಿದ್ದಾನೆ. ಯಶೋದಮ್ಮ ನಿರಾಕರಿಸಿದ್ದಾಳೆ. ಇದರಿಂದ ಕುಪಿತನಾದ ಸಬ್‌ಇನ್ಸಪೆಕ್ಟರ್ ''ಇನ್ನು ನಿನ್ನಿಷ್ಟ, ನಾವೇನೂ ಮಾಡಲಾಗುವುದಿಲ್ಲ. ನಿನಗೆ ರಕ್ಷಣೆ ಕೊಡಲು ಸಾಧ್ಯವಿಲ್ಲ'' ಎಂದು ಯಶೋದಮ್ಮನ ಕುಟುಂಬಕ್ಕೆ ನೀಡಲಾದ ಪೋಲೀಸರು ರಕ್ಷಣೆ ಹಿಂತೆಗೆದುಕೊಂಡಿದ್ದಾನೆ.

ಪರಿಣಾಮ 26 ರ ರಾತ್ರಿ ವಸಂತರೆಡ್ಡಿ, ಶ್ರೀನಿವಾಸರೆಡ್ಡಿ, ಕೋದಂಡರಾಮರೆಡ್ಡಿ, ವೆಂಕಟರೆಡ್ಡಿ, ಗಂಗಿರೆಡ್ಡಿ, ಬ್ರಹ್ಮಾನಂದರೆಡ್ಡಿ, ಗಂಗಾಧರರೆಡ್ಡಿ, ಜಯರಾಮರೆಡ್ಡಿ, ಕೃಷ್ಣಾರೆಡ್ಡಿ ಮುಂತಾದವರು ಗುಂಪುಗೂಡಿ ಮಾರಕಾಸ್ತ್ರಗಳಿಂದ ಸಜ್ಜಾಗಿ ಯಶೋದಮ್ಮನ ಮನೆಗೆ ದಾಳಿ ಮಾಡಿದ್ದಾರೆ. ಬಾಗಿಲು ಮುಚ್ಚಿಕೊಂಡಿದ್ದರಿಂದ ಮಾಡಿನ ಹೆಂಚು ಇಳಿಸಿ ಒಳಗೆ ನುಗ್ಗಿದ್ದಾರೆ. ಬಾಗಿಲನ್ನು ಒಡೆದು ಯಶೋದಮ್ಮ ಹಾಗೂ ಆಕೆಯ ಇಬ್ಬರು ಪ್ರೀತಿಯ ಮಕ್ಕಳಾದ ಚಂದ್ರಶೇಖರ್ ಮತ್ತು ದಿನೇಶ್‌ರನ್ನು ಅಂಗಳಕ್ಕೆ ಎಳೆದು ತಂದು ಕೊಚ್ಚಿದ್ದಾರೆ. ಕಗ್ಗೊಲೆಯ ನಂತರ ದಲಿತರಲ್ಲೇ ತಯಾರು

ಮಾಡಿಟ್ಟುಕೊಂಡಿದ್ದ ಬಲಿಪಶು ಸೀತಪ್ಪನನ್ನು ಬೇತಮಂಗಲಕ್ಕೆ ಕರೆತಂದು ''ಪೋಲಿಸು ಠಾಣೆಗೆ ಹೋಗ್ಗಿ ನಾನೇ ಮೂವರನ್ನು ಕೊಂದೆ'' ಎಂದು ತಪ್ಪೊಪ್ಪಿಕೊಳ್ಳಲು ಹೇಳಿದ್ದಾರೆ. ಜೊತೆಗೆ ನಂಬಿಸಲು ಅನುಕೂಲವಾಗುವಂತೆ ಅವನ ಕೈಯನ್ನು ಅವನೇ ಕತ್ತರಿಸಿಕೊಳ್ಳಲು ಆದೇಶಿಸಿದ್ದಾರೆ. ಆತ ಹಿಂಜರಿದಾಗ ಆ ಕೆಲಸವನ್ನು ತಾವೇ ಮಾಡಿ ಠಾಣೆಗೆ ಅಟ್ಟಿದ್ದಾರೆ. ಇದಕ್ಕೆಂದೇ ಕಾಯುತ್ತಿದ್ದ ಪೋಲೀಸರು ಇದನ್ನು ಮಾಮೂಲಿ ದಲಿತರ ನಡುವಿನ ಘರ್ಷಣೆ ಎಂದು ದಾಖಲೆ ಮಾಡಿದ್ದಾರೆ.

ದಲಿತ ಸಂಘಟನೆಗಳು ಕಣ್ಣು ಬಿಡುವುದರ ಒಳಗಾಗಿ ಮೂರು ಜೀವಗಳು ಕಣ್ಮರೆಯಾಗಿ ಹೋಗಿವೆ. ದಸಂಸದ ಒಂದು ಬಣ ಗ್ರಾಮಕ್ಕೆ ಧಾವಿಸುವುದರ ಒಳಗಾಗಿ ಸಬ್‌ಇನ್ಸ್‌ಪೆಕ್ಟರ್ ಮುನಿಯಪ್ಪ ಆತುರಾತುರವಾಗಿ ಮರಣೋತ್ತರ ಪರೀಕ್ಷೆ ನಡೆಸಿ, ಮೃತರ ವಾರಸುದಾರರ ಅಭಿಪ್ರಾಯವನ್ನೂ ಪಡೆಯದೆ ಜೆಸಿಬಿ ಯಂತ್ರ ತರಿಸಿ ಮೂರು ಹೆಣಗಳಿಗೂ ಒಂದೇ ಗುಳಿ ತೋಡಿಸಿ ಮುಚ್ಚಿ ಹಾಕಲು ಸಜ್ಜಾಗಿ ನಿಂತಿದ್ದಾನೆ. ದಸಂಸ ಕಾರ್ಯಕರ್ತರ ಪ್ರತಿಭಟನೆಗೆ ಮಣಿದು ನಂತರ ಮೂವರಿಗೂ ಬೇರೆ ಬೇರೆ ಗುಳಿಗಳ ವ್ಯವಸ್ಥೆಯಾಗಿದೆ. ಸಂಬಂಧಿಕರು ಬರುವವರೆಗೂ ಕಾಯಬೇಕೆಂದು ಮೃತರ ವಾರಸುದಾರರು ಗೋಳಾಡಿದರೂ ಕೇಳದೆ ಸಂಸ್ಕಾರ ಶಾಸ್ತ್ರ ಮಾಡಿ ಮುಗಿಸಿದ್ದಾನೆ.

ಒಬ್ಬ ಪೊಲೀಸು ಅಧಿಕಾರಿಯೇ ಖುದ್ದು ಹೇಳಿದ ಮಾತು ''ಸುಮ್ಮನೆ ಕೊಲೆ ನಡೆದು ಹೋಗಿದ್ದರೆ ಏನೂ ಅನಿಸ್ತಾ ಇರಲಿಲ್ವೇನೋ. ಆದರೆ ಅವರು ಕೊಲೆ ಮಾಡಿರೋ ರೀತಿ ತುಂಬಾನೇ ಬರ್ಬರ. ಮಕ್ಕಳನ್ನು ಅವಳ ಮುಂದೆಯೇ ಕೊಚ್ಚಿರುವ ರೀತಿ. ಆಯಮ್ಮನ ಮರ್ಮಾಂಗಕ್ಕೆ ಇಟ್ಟಿರುವ ರಿಫೀಸಿ ಪಟ್ಟಿ ನೆನೆದರೆ ಹಿಂಸೆಯಾಗುತ್ತದೆ''.

ಬರಹಗಾರರಾದ ನಮ್ಮನ್ನು ಈ ಬರ್ಬರ ಹತ್ಯಾಕಾಂಡ ತಲ್ಲಣಗೊಳಿಸಿರುವುದು ನಿಜವಾದರೂ ಅದಕ್ಕಿಂತಲೂ ಹೆಚ್ಚು ತಲ್ಲಣಗೊಳಿಸಿರುವುದು ಈ ಹತ್ಯಾಕಾಂಡಕ್ಕೆ ದಲಿತ ಸಂಘಟನೆಗಳು ತೋರುತ್ತಿರುವ ಮೌನ ಮತ್ತು ನಿರ್ಲಕ್ಷ್ಯ. ಜೊತೆಗೆ ಪ್ರತಿಕ್ರಿಯಿಸುತ್ತಿರುವ ರೀತಿಯಂತೂ ಭೀತಿಗೊಳಿಸುವಂತಿದೆ. ರಾಜಧಾನಿಯ ಅಂಬೇಡ್ಕರ್ ಭವನದಲ್ಲಿ ಇತ್ತೀಚೆಗೆ ಮೊಳಗಿದ ಸಾವಿರ ತಮಟೆಗಳು ಈ ಕೊಲೆಯಾದ ತಾಯಿಮಕ್ಕಳ ಆರ್ತನಾದ ಧ್ವನಿಸುವುದಿಲ್ಲ. ಕನಿಷ್ಟ ಕಗ್ಗೊಲೆ ಖಂಡಿಸಿ ಒಂದು ನಿರ್ಣಯ ಕೂಡ ಪಾಸಾಗುವುದಿಲ್ಲ. ಇನ್ನೊಂದು ಸುವರ್ಣ ಮಹೋತ್ಸವ ಆಚರಿಸಿಕೊಳ್ಳುವ ಬಣಕ್ಕೆ ಅವರ ಸುವರ್ಣಾಕ್ಷರಗಳಿಗೆ ರಕ್ತ ಮೆತ್ತಿಕೊಂಡಿರುವ ಅರಿವೂ ಆಗುವುದಿಲ್ಲ. ಮಿಕ್ಕ ಬಣಗಳ ಕಣ್ಣು ಮುಚ್ಚಿದೆಯೋ ತೆರದಿದೆಯೋ ಒಂದೂ ಗೊತ್ತಾಗುವುದಿಲ್ಲ.

ಹೀಗಾಗಿ ಒಂದು ಕಾಲಕ್ಕೆ ಇಂಥ ಹತ್ಯಾಕಾಂಡಗಳನ್ನು ಕನಸೂ ಮನಸಿನಲ್ಲೂ ಕಲ್ಪಿಸಿಕೊಳ್ಳಲಾಗದಷ್ಟು ದಲಿತ ಪ್ರಜ್ಞೆ ಜಾಗೃತವಾಗಿದ್ದ ಕೋಲಾರ ಜಿಲ್ಲೆಯಲ್ಲಿ ಒಂದಾದ ಮೇಲೊಂದು ಬರ್ಬರ ಹತ್ಯಾಕಾಂಡಗಳು ಮುಂದುವರೆಯುತ್ತಿವೆ. ಆಂಧ್ರದ ಗಡಿಭಾಗದ ದಲಿತರು ಭೀತಿಯಿಂದ ಕಂಗಾಲಾಗಿದ್ದಾರೆ. ದಲಿತರ ಮೇಲೆ ನಡೆಯುತ್ತಿದ್ದ ನೇರ ಹಲ್ಲೆಗಳು ಈಗ ದಲಿತರನ್ನು ಒಡೆದು ಎರಡು ಗುಂಪುಗಳಾಗಿಸಿ ದಲಿತ-ದಲಿತರ ಘರ್ಷಣೆಯ ಸ್ವರೂಪ ಪಡೆಯುತ್ತಿವೆ. ದಲಿತ ಸಂಘಟನೆ ಒಡಕುದ್ವೀಪಗಳಾಗಿ ಕಟ್ಟಕಡೆಯದಾಗಿ ಉಳಿದಿದ್ದ ಬದುಕುವ ನಂಬಿಕೆಯನ್ನೂ ನುಚ್ಚುನೂರುಮಾಡಿವೆ.

ಇಂಥ ದಿಕ್ಕೆಟ್ಟ ದಾರುಣದ ಹೊತ್ತಲ್ಲಿ ದಲಿತ ಬರಹಗಾರರಾದ ನಮ್ಮ ಮನವಿ ಇಷ್ಟೇ. ''ದಲಿತ ಸಮುದಾಯವೇ ಇನ್ನಾದರೂ ಕಣ್ಣುಬಿಟ್ಟು ನಿನ್ನನ್ನೇ ನೀನು ನೋಡಿಕೋ... ಪ್ರತಿಯೊಬ್ಬರ ಮನೆಯ ಅಂಗಳದಲೂ ನಾಗಲಾಪಲ್ಲಿಯ ತಾಯಿಮಕ್ಕಳ ರಕ್ತ ಬಿದ್ದಿದೆ. ನಿನ್ನ ಮೌನ ನಿನ್ನನ್ನು ಕೊಲೆಗಡುಕರಿಗಿಂತ ದೊಡ್ಡ ಅಪರಾಧಿಯ ಸ್ಥಾನದಲ್ಲಿ ನಿಲ್ಲಿಸುತ್ತದೆ. ನೀನು ಬಾಯಿಬಿಡದೇ ಹೋದರೆ ನಿನ್ನ ಕೈಗಳಿಗೆ ಪಾತಕದ ರಕ್ತ ಅಂಟಿಕೊಳ್ಳುತ್ತದೆ.'' ನಾಗಲಾಪಲ್ಲಿಯ ಸೂತಕ ಕಳೆದುಕೊಳ್ಳುವುದಕ್ಕೆ ತಕ್ಕ ದಾರಿ ಯಾವುದೋ ನಮಗೆ ತಿಳಿಯದು. ಆದರೆ ಕೊಲೆಯಾದ ನಂತರ ಜೂನ್ 26ರಂದು ಬರಹಗಾರರಾದ ನಾವು ನಾಗಲಾಪಲ್ಲಿಯಲ್ಲಿ ಸೇರಿ ನಮ್ಮ ದುಮ್ಮಾನವನ್ನಾದರೂ ಹಂಚಿಕೊಳ್ಳುವುದಕ್ಕೆ ಮುಂದಾಗಿದ್ದೇವೆ. ನಿಮಗೂ ಪಾಲುಗೊಳ್ಳಬೇಕು ಅನ್ನಿಸಿದರೆ ದಯಮಾಡಿ ನಮ್ಮೊಂದಿಗೆ ಬನ್ನಿ. ನಾಗಲಾಪಲ್ಲಿಗೆ ಹೋಗೋಣ.

# ಅಹಂಕಾರದ ಉರಿ ಎದುರು ಮಣ್ಣ ಹಣತೆಗಳು ಉರಿಯಲೇಬೇಕು.

ನಾಗಲಾಪಲ್ಲಿಯ ತಾಯಿ ಮಕ್ಕಳ ಕಗ್ಗೊಲೆ ವಿಷಯ ರಾಮಯ್ಯನ ತಲೆ ಮನಸ್ಸು ಹೊಕ್ಕು, ಚಡಪಡಿಸುತ್ತಿದ್ದ. ಏನಾದ್ರು ಮಾಡಬೇಕೆಂದು ತನ್ನ ಚಡಪಡಿಕೆಯನ್ನು ಇತರರಿಗೂ ಹಂಚಿದ್ದ. ಆ ಸಮಯದಲ್ಲೆ ಒಂದು ದಿನ ಮನೆಗೆ ಫೋನ್ ಮಾಡಿ ನಾಳೆ ಬೆಳಗ್ಗೆ 8-30 ಕ್ಕೆ ಕಲಾಕ್ಷೇತ್ರಕ್ಕೆ ಬಂದ್ಬುಡಮ್ಮ ಎಲ್ರೂ ನಾಗಾಪಲ್ಲಿಗೆ ಹೋಗ್ತಾ ಇದೀವಿ ಅಂತ ರಾಮಯ್ಯ ಹೇಳ್ದಾಗ್ಲಿಂದ ನನ್ನ ಚಡಪಡಿಕೆ ಜಾಸ್ತಿ ಆಯ್ತು. ಹೋಗ್ಲೊ, ಬೇಡೋ ಅಂತಲೆ ಕಲಾಕ್ಷೇತ್ರಕ್ಕೆ ಹೋಗಿದ್ದು ಆಯ್ತು, ಅಲ್ಲಿ ತುಮಕೂರಿನಿಂದ ಬರ್ಬೇಕಾಗಿದ್ದ ಸಿದ್ದಯ್ಯನವರಿಗೆ 11 ಗಂಟೆವರ್ಗೂ ಕಾದಿದ್ದೂ ಆಯ್ತು, ಸಿದ್ದಯ್ಯನವರು ಟೌನ್‌ಹಾಲ್ ಮುಂದೆ ಪ್ರತ್ಯಕ್ಷರಾದಷ್ಟೇ ಬೇಗ ಅದೃಶ್ಯರಾದಾಗ ಸಿಟ್ಟು ನೆತ್ತಿಗೇರಿತ್ತು. ಮತ್ತೆ ಅವರು ಅವತರಿಸಿ ನಾವು ಕಲಾಕ್ಷೇತ್ರ ಬಿಟ್ಟಾಗ 11-30. ದಲಿತ ಸಮುದಾಯದ ಇಂದಿನ ಸ್ಥಿತಿ, ಅದರ ಮುಂದಿರುವ ಸವಾಲುಗಳು, ನಿಂತು ಹಿಂತಿರುಗಿ ನೋಡಿಕೊಳ್ಳಬೇಕಾಗಿರುವುದು, ತಪ್ಪಿದ್ದೆಲ್ಲಿ ? ಕೊಂಡಿ ಕಳಚಿಕೊಂಡಿದ್ದೆಲ್ಲಿ? ಬೆಸೆಯುವ ಬಗೆ ಹೇಗೆ? ಹೀಗೆ ಈ ಮಾತುಗಳ ಧ್ಯಾನದಲ್ಲಿ ಕುದಿಯುತ್ತಿದ್ದ ಸಿಟ್ಟು ಆವಿಯಾಗಿ ಹೋಗಿತ್ತು.

ಕೋಲಾರ ತಲುಪಿ ಸಂಚಿಕೆ ಆಫೀಸಿಗೆ ಹೋದವು. ರಾಮಯ್ಯ, ಸಿದ್ದಯ್ಯ, ಗೋವಿಂದಯ್ಯ- ಮೂರು ಅಯ್ಯಗಳನ್ನು ಒಟ್ಟಿಗೆ ನೋಡಿ ಸಿಯಮ್ಮಣ್ಣರಿಗೆ ಆನಂದ. ಕೊಲೆಯಾದ ಯಶೋಧಮ್ಮನ ಮಗ ಅಲ್ಲೆ ಇದ್ದ. ಕೊಲೆಯಾದ ದಿನ ಅವನು ಊರಿನಲ್ಲಿ ಇಲ್ಲದಿದ್ದ ಕಾರಣ ಬದುಕುಳಿದ. ಅವನ ಕೈಲಿ ರಕ್ಷಣೆಗೆಂದು ಪೋಲಿಸರು ನೀಡಿರುವ ಬಂದೂಕ.ನಾವೆಲ್ಲರೂ ನಾಗ್ಲಾಪಲ್ಲಿಗೆ ಹೊರೆಟೆವು. ಅವನೂ ಜೊತೆಗೆ ಬಂದ ಅಂತ ನನಗೆ ಆತಂಕ. ಈಗೇನೂ ತೊಂದ್ರೆ ಇಲ್ಲ ಬರ್ಲಿ ಅಂದ್ರು ಎಲ್ರೂ. ಹೋಗ್ತಾ ದಾರೀಲಿ ರಾಮಯ್ಯಂದು, ಸಿಯಮ್ಮಣ್ಣಂದು ಕಥೆಗಳು ಹರ್ಕೊಂಡು ಬರ್ತಾ ಇದ್ದವು. ಪಾರ್ಥ ಮುಖ ಅರಳಿಸಿ ಕೇಳ್ತಾ ಇದ್ದ. ಬಸವರಾಜು ಜಡೆಮುನಿಯಂತೆ ಮೌನವಾಗಿ ಕೇಳ್ತಾ ಇದ್ರು. ನಿದ್ದೆಯಲ್ಲೊ ಧ್ಯಾನಸ್ಥ ಸ್ಥಿತಿಯಲ್ಲೊ ಇದ್ದ ಸಿದ್ದಯ್ಯನವರು ಆಗಾಗ್ಗೆ ಹಿಂತಿರುಗಿ ದೃಷ್ಟಿ ಹರಿಸುತ್ತಿದ್ದರು. ನಾಗರಾಜು ನಡು ನಡುವೆ ಕತೆಗೆ ಧನಿ ಸೇರಿಸುತ್ತಿದ್ದರು. ಗೋಪಾಲಕೃಷ್ಣ ಅವರದು ಎಕ್ಸ್‌ಪರ್ಟ್ ಕಮೆಂಟ್ಸ್ ಬಂದ್ರೆ, ಗೋವಿಂದಯ್ಯನದು ಅಲ್ಲಣ್ಣಾ, ಮತೀಗಾ ಅಂತಾ ಪ್ರಶ್ನೆ ಹಾಕಿ ವಿವರಪಡ್ಕೋಳೋ ಆಟ.

ರಾಮಯ್ಯನಿಗೆ ಹಳ್ಳಿ ಹಳ್ಳಿಗೂ ಒಂದೊಂದು ಕತೆ, ನಡೆದ ಕೊಲೆಗಳು, ಸುರಿದನೆತ್ತರು, ಪಾಳೆಗಾರರ ಕೋಟೆ ಹತ್ತಿ ಬಾಗಿಲು ತೆಗೆದು ಅವರ ಮನೆಯಂಗಳದಲ್ಲೆ ನಡೆಸಿದ ದಲಿತರ ಕೋರ್ಟು, ಮಣ್ಣು ಮಾಡಿದ ಹೆಣಗಳು, ಹೊಡೆದುರುಳಿಸಲು ಬಂದವರಿಂದ ಆಚಾನಕ್ ಆಗಿ ಬಚಾವಾದುದು, ದೋಚಲೆಂದು ಬಂದ ಕಳ್ಳ ದ.ಸಂ.ಸದವರೆಂದು ತಿಳಿದು ಅಣ್ಣಾ ಎಂದು ಕಾಲು ಹಿಡಿದಿದ್ದು...... ಹೀಗೆ ದಲಿತ ಚಳುವಳಿಯೊಂದಿಗೆ ಭಾವನಾತ್ಮಕವಾಗಿದ್ದ ನನ್ನ ನಂಟು ರಾಮಯ್ಯ ಮರು ಜೀವ ನೀಡುತ್ತಿದ್ದ ನೆನಪುಗಳಲ್ಲಿ ಬೇರು ಬಿಡುತ್ತಿತ್ತು. ಪುಟ್ಟ ಹುಡುಗಿಯಾಗಿದ್ದಾಗ ಅವ್ವ ಅವಳ ನೆನಪಿನಾಳದಿಂದ ಯಾರ್ಯಾರನ್ನೊ ಜೀವಂತವಾಗಿಸುತ್ತಿದ್ದಾಗ, ಆಗ ನಾನಿರಬೇಕಾಗಿತ್ತು ಅನ್ನಿಸುತ್ತಿತ್ತು. ರಾಮಯ್ಯನ ಕತೆ ಕೇಳುತ್ತಾ ನಾನು ಸ್ವಲ್ಪ ಮೊದಲು ಹುಟ್ಟಬೇಕಾಗಿತ್ತು ಎನಿಸತೊಡಗಿತು.

ಬೇತಮಂಗಲ ದಾಟಿ ನಾಗ್ಲಪಲ್ಲಿ ತಲುಪಿದೆವು. ಮುಖ್ಯ ರಸ್ತೆಯಿಂದ ಬಲಕ್ಕೆ ಊರಿನೊಳಗೆ ಹೋಗುವ ದಾರಿಗೆ ತಿರುಗಿದೆವು. ಎಲ್ಲೆಡೆ ರಾವು ಬಡಿದಿತ್ತು. ಜನರ ಸುಳಿವಿಲ್ಲ. ಎಡಕ್ಕೆ ಉದ್ದಕ್ಕೂ ಒಣ ಹುಲ್ಲು ಸುಟ್ಟು ಹೋಗಿದ್ದರ ಗುರುತು. ಅದರ ಹಿಂದೆ ಸಾಲು ಮನೆಗಳು. ಮನೆಯ ಮುಂದೆ ಚಪ್ಪರಗಳು. ಮುಂದೆ ಹೋಗಿ ಎಡಕ್ಕೆ ಹಟ್ಟಿಯೊಳಗೆ ಕಾಲಿಟ್ಟ ಕೂಡಲೇ ಎಂಥದೋ ಅನ್‌ಇಜಿ ಫೀಲಿಂಗ್. ರಾವು ಬಡಿದು ಬಿಕೊ ಎನ್ನುವ ಮನೆಗಳು, ಮನೆ ದಾಟಿ ಮುಂದೆ ಹೋದರೆ ಎಡಕ್ಕೊಂದು ಪಾಳುಬಿದ್ದ ದೇವಸ್ಥಾನ, ನೀರು ನಿಡಿ ಏನೂ ಕಾಣದೆ ಧೂಳಿಡಿದ ಉತ್ಸವ ಮೂರ್ತಿ. ದೇವಸ್ಥಾನದ ಪಕ್ಕಕ್ಕಿದ್ದ ಅಂಗಳದ ಎದುರು ಯಶೋದಮ್ಮನ ಮನೆ. ತಾಯಿ ಮಕ್ಕಳ ನೆತ್ತರು ಚೆಲ್ಲಾಡಿದ ಅಂಗಳ, ನೆತ್ತರ ಗುರುತೂ ಇರಲಿಲ್ಲ, ವಾಸನೆಯೂ ಇರಲಿಲ್ಲ ಎಲ್ಲವನ್ನೂ ಧರಣಿದೇವಿ ಇಂಗಿಸಿಕೊಂಡಿದ್ದಳು.

ಮನೆಯೊಳಗೆ ಹೋದೆವು. ಮನೆ ಧೂಳು, ಕಸ ಸೇರಿ ಪಾಳುಬಿದ್ದಿತ್ತು.

ಮನೆಯಿಂದ ತಾಯಿ-ಮಕ್ಕಳ ಕಗ್ಗೊಲೆಗೆ ಕಾರಣವಾದ ಜಮೀನು ನೋಡಲು ಹೋದೆವು. ಬದುವಿನ ಮೇಲೆ ಹೋಗುತ್ತಿದ್ದಾಗ ಹಿಂದಿನಿಂದ ಯಾರದೋ ರೋದನ. ತಿರುಗಿ ನೋಡಿದರೆ ಮುಖ ಮುಚ್ಚಿಕೊಂಡ ಹೆಂಗಸು, ಗಾಳಿಯಲ್ಲಿ ಬೀಸುತ್ತಿದ್ದ ಅವಳ ಸಣಕಲು ಕೈ. ಅವಳ ಮಾತು ಊಳಿಟ್ಟಂತೆ, ಏನೆಂದು ತಿಳಿಯಲಿಲ್ಲ. ಆಕೆ ಏನೋ ಹೇಳ್ತಾ ಇದ್ದಾಳೆ ನೋಡಿ ಅಂದೆ. "ಯಶೋದಮ್ಮನ ತಂಗಿ, ಕ್ಯಾನ್ಸರ್ ಆಕೆಗೆ, ವಾಸ್ನೆ ಅಂತ ಹತ್ರ ಬರಲ್ಲ, ದೂರ ನಿಂತೆ ಏನೊ ಹೇಳ್ತಾ ಅಳ್ತಾಳೆ ಕೊಲೆ ಆಗಿದ್ದನ್ನ ಕಣ್ಣಾರೆ ನೋಡಿದ್ದಾಳೆ." ನಾನು ಮುಂದೆ ಹೋಗಲಾರದೆ ಅಲ್ಲೆ ನಿಂತೆ. ಎಲ್ಲರೂ ಆಗಲೇ ಸಮಾಧಿ ಬಳಿ ಹೋಗಿದ್ದರು. ಹೆಜ್ಜೆ ಎತ್ತಿಡಲು ಹೋದೆ ಇನ್ನಾರದೊ ಆಕ್ರಂದನ ಕೇಳಿ ಹಾಗೇ ನಿಂತು ಬಿಟ್ಟೆ. ಯಶೋದಮ್ಮನ ಅಣ್ಣ ಗುಡ್ಡೆ ಮುಂದೆ ಕೂತು ಪದೇ ಪದೇ ಗುಡ್ಡೆಯತ್ತ ಕೈ ತೋರುತ್ತಾ ಏನೊ ಹೇಳುತ್ತಾ ರೋದಿಸುತ್ತಿದ್ದ. ಈ ಕಡೆ ಯಶೋದಮ್ಮನ ತಂಗಿಯ ಬೀಸುತ್ತಿದ್ದ ಕೈಗಳು ಆ ಕಡೆ ಗುಡ್ಡೆಯತ್ತ ತೋರುತ್ತಿದ್ದ ಮುನಿಯಪ್ಪನ ಕೈಗಳು ಅಲ್ಲಿಂದ ಓಡಿ ಬಿಡಬೇಕೆನಿಸಿತು. ಮನೆಯೊಳಗೆ ಹೋಗಿ ಬಾಗಿಲು ಬಡಿದುಕೊಂಡು ನಾನು ಕಂಡ ಬೆಚ್ಚನೆ ಪ್ರೀತಿಯಪ್ಪೆ ಜಗತ್ತಲ್ಲಿ ಸತ್ಯ ಎಂಬ ಭ್ರಮೆಯಲ್ಲಿ ಬದುಕಿ ಸತ್ತು ಬಿಡಬೇಕು. ಭೀಕರ ರಿಯಾಲಿಟಿಗಳನ್ನು ನಂಬಲೇಬಾರದು. ಹೀಗೆಂದುಕೊಳ್ಳುತ್ತಿದ್ದಾಗಲೇ ಸಮಾಧಿಯ ಬಳಿ ಹೋಗಿದ್ದವರು ಹಿಂದೆ ಬಂದರು. ಎಲ್ಲರೂ ಹೋಗಿ ವ್ಯಾನ್ ಹತ್ತಿ ಕೂತೆವು.

ತಲೆಯೊಳಗೆ ಪ್ರಶ್ನೆಗಳು ಕುದಿಯುತ್ತಿದ್ದವು. ಇಡೀ ಹಳ್ಳಿಯ ಜನರೆದುರು ತಾಯಿ ಮಕ್ಕಳನ್ನು ಕೊಚ್ಚಿ ಹಾಕಿದ್ದಾರೆ. ಒದ್ದಾಡಿ ಸಾಯುತ್ತಿದ್ದ ಜೀವಗಳ ಆಕ್ರಂದನ ಕೇಳಿ ಹೊಡೆಯುತ್ತಿದ್ದವರನ್ನು ತಡೆಯಬೇಕೆಂದು ಯಾರಿಗೂ ಅನಿಸಲಿಲ್ಲವೆ? ಒಂದೇ ಒಂದು ಜೀವಕ್ಕಾದರೂ ಓಡಿ ಹೋಗಿ ಪೋಲಿಸರಿಗೆ ತಿಳಿಸಬೇಕಿನಿಸಲಿಲ್ಲವೆ? ಎಲ್ಲರ ಬಾಯಿಗೆ, ಕಾಲುಗಳಿಗೆ ಸರಪಳಿ ಬಿಗಿದು ಬೀಗ ಜಡಿದವರಾರು? ಅಲ್ಲಿನ ಪೋಲಿಸ್ ಠಾಣೆಯ ಮುಖ್ಯಸ್ಥನೆ ಕೊಲೆಯಲ್ಲಿ ಶಾಮೀಲಾಗಿರುವಾಗ ಯಾರಿಗೆ ತಿಳಿಸಬೇಕಿತ್ತು? ಯಾವ ಹೆಂಗಸಾಗಲಿ ಅದರಲ್ಲೂ ಮಕ್ಕಳಿದ್ದರೆ ಸಾಮಾನ್ಯವಾಗಿ ದ್ವೇಷ ಕಟ್ಟಿಕೊಳ್ಳಲಾರಳು, ಕಷ್ಟ ಸುಖಕ್ಕೆ ಆಸರೆಯಾಗಲೆಂದು ಅಕ್ಕ ಪಕ್ಕದವರ ಜೊತೆ ಚೆನ್ನಾಗಿರುತ್ತಾರೆ. ಇಲ್ಲಿ ಇಡಿ ಊರೇ ಯಶೋದಮ್ಮನ ವಿರುದ್ಧ ನಿಲ್ಲಲು ಕಾರಣವೇನು? ಎಲ್ಲರೂ ಆಕೆ ಬಗ್ಗೆ ಹೇಳ್ತಾ ಇದ್ದಿದ್ದು ಆಕೆ ತುಂಬಾ ಸ್ವಾಭಿಮಾನಿ, ಯಾರಿಗೂ ತಲೆ ತಗ್ಗಿಸುತ್ತಿರಲಿಲ್ಲ, ತನ್ನ ಜಮೀನು ಮಾರಲು ಸಿದ್ಧವಿರಲಿಲ್ಲ ಎಂದು.

ವಿಚಾರಣೆ ನಡೆಸುತ್ತಿದ್ದ ಅಧಿಕಾರಿಯನ್ನು ಭೇಟಿ ಮಾಡಲು ಹೋದೆವು. ಆ ಅಧಿಕಾರಿಯೂ ಅದೇ ಮಾತನ್ನು ಹೇಳಿದರು ಯಶೋದಮ್ಮ ಸ್ವಾಭಿಮಾನಿ ಹೆಂಗ್ಸು, ಹೋರಾಟಗಾರ್ತಿ. ಜಮೀನಿಗೆ ಸಂಬಂಧಪಟ್ಟಂತೆ 100ಕ್ಕೂ ಮೇಲ್ಪಟ್ಟು ಅರ್ಜಿ ನೀಡಿದ್ದಾಳೆ. ಒಂಟಿಯಾಗಿ ಇಷ್ಟು ವರ್ಷ ತನ್ನ ಜಮೀನು ಉಳಿಸಿಕೊಳ್ಳೋಕೆ ಹೋರಾಡಿದ್ದಾಳೆ. ಅವಳ ಧೈರ್ಯ ಮೆಚ್ಚುವಂತದ್ದು, 78-79 ರಲ್ಲಿ ಆಕೆಯ ಮೇಲೆ SITA (Suppression of immoral traffic act) ಕಾಯ್ದೆ ಅಡಿ ಕೇಸು ಹಾಕಲಾಗಿತ್ತು. ಯಾವುದಕ್ಕೂ ಆಕೆ ಜಗ್ಗಿಲ್ಲ. ಇಡೀ ಸಮುದಾಯವನ್ನು ಆಕೆಯ ವಿರುದ್ಧ ಎತ್ತಿಕಟ್ಟಿದ್ದು ಯಾಕೆಂದು ತಿಳಿಯಿತು.

ಯಶೋದಮ್ಮ ದಲಿತ ಹೆಂಗಸು, ನೋಡಲು ಚೆನ್ನಾಗಿದ್ದಳಂತೆ, ಜೊತೆಗೆ ಮಹಾ ಸ್ವಾಭಿಮಾನಿ. ಆಕೆ ಎದುರಿಸಿ ನಿಂತಿದ್ದು ಭೂಮಿಗೇ ಮಾಲೀಕರಾದ ಮೇಲ್ಜಾತಿ ಗಂಡಸರ ವಿರುದ್ಧ! ಅಲ್ಲಿರೊ 12 ಎಕ್ರೆ ಜಮೀನು 4 ಜನಕ್ಕೆ ಸೇರಿದ್ದು. ಯಶೋದಮ್ಮನನ್ನು ಬಿಟ್ಟು ಉಳಿದ ಮೂರು ಜನರು ಸುಲಭವಾಗಿ ಜಮೀನನ್ನ ಮಾರಿದ್ರು. ಯಶೋದಮ್ಮನ ಜಮೀನಿದ್ದದ್ದು ನಡುಮಧ್ಯೆ. ಜಮೀನು ಮಾರು ಅಂತ ಒತ್ತಾಯ ಮಾಡ್ತಾನೇ ಇದ್ರು, ಅವಳ ಜಮೀನಿಗೆ ಹೋಗೊದಕ್ಕೂ ದಾರಿ ಕೊಡ್ದೆ ಕಿರುಕುಳ ಕೊಡ್ತಾ ಇದ್ರು. ಅವಳೂ ಜಗ್ದೆ ಹೊಡ್ದಾಡಿ 1995 ರಲ್ಲಿ ಜಮೀನಿಗೆ ಹೋಗಲು ಕಾನೂನು ಬದ್ಧವಾಗಿ ರಸ್ತೆ ಮಾಡಿಸಿಕೊಂಡಿದ್ಲು.

ಕೊನೆಯದಾಗಿ ಕೇಳಿದಾಗಲೂ ಒಪ್ದೆ ಇದ್ದಾಗ ದಿನಾಂಕ 26-04 ರಂದು ರಾತ್ರಿ 8-30 ರ ಹೊತ್ತಿನಲ್ಲಿ, ಗುಂಪೊಂದು ಯಶೋದಮ್ಮನ ಮನೆಯ ಹೆಂಚು ತೆಗೆದು ಒಳನುಗ್ಗಿ, ಬಾಗಿಲು ಹೊಡೆದು ಹಾಕಿ ತಾಯಿ ಮಕ್ಕಳನ್ನು ಹೊಡೆದು ಈಚೆಗೆ ಎಳೆದು ತಂದು ಅತ್ಯಂತ ಘೋರವಾಗಿ ಕೊಲೆಗೈದಿತು. ದೂರಿನಲ್ಲಿ ಕೊಲೆ ಎಂದು ಮಾತ್ರ

ದಾಖಲಾಗಿದ್ದು ಆಕೆಯ ಮೇಲೆ ನಡೆದ ಲೈಂಗಿಕ ಹಿಂಸೆ ದಾಖಲಾಗಿಲ್ಲ. ಕೆಳಜಾತಿಯ ಹೆಂಗಸೊಬ್ಬಳು ತಲೆ ಎತ್ತಿ ನಿಂತಿದ್ದಕ್ಕೆ ತಕ್ಕ ಶಾಸ್ತಿ ಮಾಡಿದ ನಂತರ ಭೂಮಾಲೀಕರ ಪುರುಷ ಅಹಂತಣ್ಣಗಾಗಿರಬೇಕು.

ಪೋಲಿಸ್ ಅಧಿಕಾರಿಯನ್ನು ಭೇಟಿಯಾದ ಮೇಲೆ ಒಂದು ವ್ಯಾನಿನಲ್ಲಿ ಕೂತೆವು. ಮಾತು ಸಾಗಿತ್ತು. ಏನಾದ್ರು ಮಾಡಬೇಕೆಂಬ ಚಡಪಡಿಕೆ ಎಲ್ಲರಲ್ಲೂ. ಇದು ಬರಿ ಲಾ ಮತ್ತು ಆರ್ಡರ್ ಸಮಸ್ಯೆಯಲ್ಲ ಏನಾದರೂ ಮಾಡಬೇಕೆಂಬ ಚಡಪಡಿಕೆ, ಏನೂ ಆಗುವುದಿಲ್ಲವೆಂಬ ತೊಳಲಾಟ. ಘೋಷಣೆ, ಕರಪತ್ರ, ಪತ್ರಿಕಾಗೋಷ್ಠಿ ಯಾವುದೂ ಉತ್ತರವಲ್ಲ. ಜಡ್ಡುಗಟ್ಟಿದ ನಮ್ಮ ಚೈತನ್ಯಗಳನ್ನು ಉಜ್ಜಿತೊಳೆದುಕೊಳ್ಳಬೇಕು, ಅಂತರಂಗವನ್ನು ಮುಟ್ಟಿ ನೋಡಿಕೊಳ್ಳಬೇಕು. ಹೇಗೆ? ಕೊನೆಗೆ ಜೂನ್ 26 ರಂದು ಆ ಮನೆಯ ಅಂಗಳದಲ್ಲಿ ಎಲ್ಲರೂ ಸೇರಿ ಮೌನ ಆಚರಿಸಿಬೇಕೆಂದು ಕೊಂಡೆವು.

26 ರ ಮೌನ ಆಚರಣೆಗೆ ಹಲವಾರು ಗಣ್ಯರು ಸೇರಿ ಇಲ್ಲಿಂದ ಬಸ್ ಮಾಡಿಕೊಂಡು ಹೋದೆವು. ಬಿಕೋ ಎನ್ನುವ ಆ ಕೇರಿ, ಮನೆಗಳು, ಅಂಗಳ ಹುಟ್ಟಿಸುವ ಅನ್ಇಸಿ ಫೀಲಿಂಗ್. ಓಡಲಾರದ ನಿಲ್ಲಲಾರದ ಚಡಪಡಿಕೆ. ಚಡಪಡಿಕೆ ಎದುರಿಸಲೇ ಬೇಕೆನಿಸಿತ್ತು. ಬಿಕೋ ಎನ್ನುವ ಆ ಮನೆಯ ಮೂಲೆಯೊಂದನ್ನು ಗುಡಿಸಿ, ಸಾರಿಸಿ ದೀಪವಿಡಬೇಕೆಂದುಕೊಂಡೆ. ಮನೆಯಿಂದ ಹೊರಡುವಾಗ ಮಣ್ಣಿನ ದೀಪಗಳು, ಹತ್ತಿ, ಎಣ್ಣೆ ಬ್ಯಾಗಿನಲ್ಲಿಟ್ಟುಕೊಂಡಿದ್ದೆ ಬಸ್ಸಿನಲ್ಲಿ ಕೂತು ನಾನು ರಾಜಿ ಬತ್ತಿ ಮಾಡಿದ್ದೇವು. ಊರು ತಲುಪಿದೆವು. ಕಗ್ಗೊಲೆಯ ಅಂಗಳದಲ್ಲಿ ಪೆಂಡಾಲ್ ಹಾಕಿದ್ದರು. ಎಲ್ಲರೂ ಮನೆ ನೋಡಿದ ನಂತರ ಸಮಾಧಿಯ ಬಳಿಹೋದರು. ಸತ್ತ ಚಂದ್ರಶೇಖರನ ಹೆಂಡತಿ ಅಲ್ಲೆ ಇದ್ದಳು. ಕೊಂಚ ನೀರು ಸಿಗುತ್ತಾ ಅಂತ ಕೇಳಿದೆ. ಹೂ ಎಂದವಳು ನೀರು ತಂದು, ನಡುಮನೆ ಗುಡಿಸಿ ಸಾರಿಸಿದಳು. ಇನ್ಯಾರೋ ರಂಗೋಲೆ ತಂದುಕೊಟ್ಟರು. ನಡುಮನೆಯಲ್ಲಿ ರಂಗೋಲೆ ಹಾಕಿದೆ. ದೀಪ ಜೋಡಿಸಿದೆ. ಚಂದ್ರಶೇಖರನ ಹೆಂಡತಿ ದೀಪ ಅಂಟಿಸಿದಳು.

ಎಲ್ಲರೂ ಪೆಂಡಾಲಿನಲ್ಲಿ ಕೂತೆವು. ಸಿದ್ದಯ್ಯನವರು ಮಾತನಾಡಿ ಒಂದು ಗಂಟೆ ಕಾಲ ಮೌನ ಆಚರಿಸಬೇಕೆಂದರು. ಕಗ್ಗೊಲೆಯಾದ ನೆಲದ ಮೇಲೆ ಕೂತಿದ್ದೆವು. ಜಮಖಾನದ ಅಡಿಯಿದ್ದ ನೆಲ ಆ ತಾಯಿ, ಮಕ್ಕಳ ರಕ್ತ ಹಿಂಗಿಸಿಕೊಂಡಿತ್ತು. ಎಲ್ಲವನ್ನು ಹಿಂಗಿಸಿಕೊಂಡು ಮತ್ತೆ ಮತ್ತೆ ಜೀವ ಚಿಗುರಿಸುವ ನೆಲತಾಯಿ. ಕಗ್ಗೊಲೆ ಬಗ್ಗೆ ಕೇಳಿಯೇ ಚಡಪಡಿಸುವ ನಾನು. ನಾನು ನಿನ್ನಂಗಲ್ಲ ತಾಯಿ, ಜಗತ್ತು ಸುಂದರವೆಂಬ ಭ್ರಮೆ ಬೇಕು ನನಗೆ ಎಂದುಕೊಂಡು ಹೊರಡಬೇಕೆನ್ನುವಷ್ಟರಲ್ಲಿ ಸಿದ್ದಯ್ಯ ಮೌನದ ಬಗ್ಗೆ ಹೇಳಿದರು. ಎದ್ದು ಹೋದ್ರೆ ಚೆನ್ನಾಗಿರಲ್ಲ ಅಂದ್ಕೊಂಡು ಕೂತೆ. ಕೂತೇ ತೀರಬೇಕೆಂದು ಕಣ್ಣು ಮುಚ್ಚಿ ನೆಟ್ಟಗೆ ಕೂತೆ. ಒಂದೊಂದೆ ಉಸಿರಿಗು ಈ ಮನೆಯಲ್ಲಿ ಮತ್ತೆ ದೀಪ ಉರಿಯಲಿ ಎಂದು ಕೂತೆ. ಚಡಪಡಿಕೆಯ ನೊಣ, ಗುಂಗ್ರುಗಳು ಮುತ್ತುತ್ತಲೆ ಇದ್ದವು. ಆ ಮನೆಯಲ್ಲಿ ಮತ್ತೆ ದೀಪ ಉರಿಯಲೇಬೇಕು. ಮಣ್ಣಿಗೇ ಒಡೆಯರಾಗಬೇಕೆನ್ನುವ ಅಹಂಕಾರದ ಉರಿ ಎದುರು ಮಣ್ಣ ಹಣತೆಗಳು ಉರಿಯಲೇಬೇಕು.

–ದು. ಸರಸ್ವತಿ

## ರೇಶ್ಮೆಯ ಗುಡಾರ

ಶತ ಶತಮಾನಗಳಿಂದಲೂ ಬಂಧಿತಳಾಗಿಹಳು ಈಕೆ
ಯುದ್ಧ ಭೂಮಿಯ ರೇಷ್ಮೆಯ ಗುಡಾರದಲ್ಲಿ
ವಸಂತ ಋತುವಿನ ನಡು
ಮಧ್ಯಾಹ್ನದ ಮಂದಾನಿಲದಲಿ
ಬತ್ತಿ ಹೋಗುವ ಮಂಜ ಹನಿಗಳಂತೆ

ದುಃಖ ನೋವುಗಳ ಸರಪಳಿಯ ಧರಿಸಿ
ದೇವದಾರು ಮರಕೆ ಜೋತು ಬಿದ್ದರೂ
ಸೌಮ್ಯತೆಯಲ್ಲಿ ನಗು ನಗುತಿಹಳು
ಗೋಪುರದಲ್ಲಿ ಶೋಭಿಸುವ ಕಳಸದಂತೆ

ಎಣಿಕೆ ಇಲ್ಲದ ರೇಷ್ಮೆಯ ಎಳೆಗಳಂತಹ
ಸಂಬಂಧ ಪಾಶಗಳ ಹೊತ್ತು ಸವೆದರೂ
ಪ್ರತಿಯೋರ್ವರನು ನಡೆಸಿಹಳು
ಕತ್ತಲಿನಿಂದ ಬೆಳಕಿನಡೆಗೆ ನಿರಂತರದಿ

ಬೇಸಿಗೆಯ ಒಣ ಗಾಳಿಯಂತೆ ಚಂಚಲವಾಗೇ
ಎಚ್ಚರದ ದಾಸ್ಯಕ್ಕೆ ಶರಣಾಗಿಹಳು

ಮೂಲ : ರಾಬರ್ಟ್ ಫ್ರಾಸ್ಟ್
ಅನುವಾದ : ಹೆಚ್.ಎಸ್. ಶಿವಶಂಕರ್

# 'ಕೋಮುವಾದಿ ರಾಜಕಾರಣಕ್ಕೆ ಹಿಂಸೆಯೇ ಆಹಾರ'

ದಿನಾಂಕ 11-8-02 ರಂದು 'ಶಾಂತಿಗಾಗಿ ನಾವು' ವೇದಿಕೆಯವರು ಬೆಂಗಳೂರಿನ ವೈ.ಎಂ.ಸಿ.ಎ ನಲ್ಲಿ ಸಭೆಯೊಂದನ್ನು ಏರ್ಪಡಿಸಿದ್ದರು. ಸಭೆಯಲ್ಲಿ ಮುಂಬೈನ ರಾಮ್ ಪುಣ್ಯಾನಿಯವರು 'ಜಾತ್ಯಾತೀತರ ಮುಂದಿರುವ ಸವಾಲುಗಳು' ಕುರಿತು ಮಾತನಾಡಿದರು. ರಾಮ್‌ರವರು ಮುಂಬೈನ ಐ.ಐ.ಟಿ.ಯಲ್ಲಿ ಉಪನ್ಯಾಸಕರಾಗಿ ಕೆಲಸ ಮಾಡುತ್ತಿದ್ದಾರೆ. ಹಲವಾರು ವರ್ಷಗಳಿಂದ ಕೋಮುವಾದ ವಿರೋಧಿ ಹೋರಾಟದಲ್ಲಿ ಸಕ್ರಿಯವಾಗಿರುವ ರಾಮ್‌ರವರು ಜಾತ್ಯಾತೀತ ನಿಲುವಿಗೆ ಬದ್ಧರಾದವರು. ರಾಮ್ ಪುಣ್ಯಾನಿಯವರ ಭಾಷಣವನ್ನು ಮಾನಸ ಓದುಗರಿಗಾಗಿ ದಾಖಲಿಸಿದ್ದೇವೆ.

ಗುಜರಾತ್‌ನ ನರಮೇಧ ನಮ್ಮೆಲ್ಲರ ಮನಸ್ಸಿನಲ್ಲಿ ಹಸಿಯಾಗಿದೆ. ಅಲ್ಲಿ ನಡೆದ ಕೋಮು ಗಲಭೆ ಭಿನ್ನ ನಮೂನೆಯದು. ಕೋಮುವಾದ ಒಂದು ರಾಜಕೀಯ ಆಗಿ ಮಾರ್ಪಟ್ಟಿದೆ. ಗುಜರಾತಿನಲ್ಲಿ ಒಂದು ಕೋಮಿನ ಜನರ ಮೇಲೆ ನಡೆದ ಹಿಂಸಾಕಾಂಡದ ಮೂಲವನ್ನು ಬಾಬ್ರಿ ಮಸೀದಿ ಘಟನೆಯಲ್ಲಿ ಕಾಣಬಹುದು. ಭಾರತದ ರಾಜಕಾರಣದಲ್ಲಿ ಬಾಬ್ರಿ ಮಸೀದಿ ಘಟನೆ ಒಂದು ಮುಖ್ಯ ತಿರುವನ್ನು ನೀಡಿತು. ಈ ಘಟನೆಯ ನಂತರ ಕೋಮುವಾದಿ ರಾಜಕಾರಣ ಹೆಚ್ಚುತ್ತಾ ಹೋಯಿತು. ಗುಜರಾತ್ ನರಮೇಧ ಯಾಕೆ ನಡೆಯಿತು ಎಂಬುದಕ್ಕೆ ಉತ್ತರವನ್ನು ಬಾಬ್ರಿ ಮಸೀದಿ ಘಟನೆಯಲ್ಲಿ ಕಾಣಬಹುದು.

1996ರಲ್ಲಿ ಎನ್.ಡಿ.ಎ. ಸರ್ಕಾರ ಅಧಿಕಾರಕ್ಕೆ ಬಂತು. ಇಲ್ಲಿನವರೆಗೂ ಶೇ 24 ಕ್ಕಿಂತ ಹೆಚ್ಚಿನ ಮತಗಳಿಸದ ಬಿ.ಜೆ.ಪಿ. ಸರ್ಕಾರ ಚುಕ್ಕಾಣಿ ಹಿಡಿಯಿತು. ಮಂದಿರ ವಿವಾದವನ್ನು ಅನೇಕ ಆಚರಣೆಗಳ ಮೂಲಕ (ಶಿಲಾನ್ಯಾಸದ ಪೂಜೆ, ಮಂದಿರಕ್ಕೆ ಬೇಕಾದ ಕಲ್ಲುಗಳ ಪೂಜೆ ಇತ್ಯಾದಿ) ಜೀವಂತವಾಗಿಡಲು ಆಚಾರ್ಯರುಗಳು, ಮಹಾಜನರುಗಳು ನಿರಂತರವಾಗಿ ಪ್ರಯತ್ನಿಸಿದರು. ಆದರೂ ಬಿ.ಜೆ.ಪಿ. ಉತ್ತರ ಭಾರತದ ವಿಧಾನ ಸಭೆ ಚುನಾವಣೆಗಳಲ್ಲಿ ದಯನೀಯವಾಗಿ ಸೋತಿತು. ಇಂತಹ ಸಂದರ್ಭದಲ್ಲಿ ಗೋದ್ರಾ ಘಟನೆ ಸಂಭವಿಸಿತು. ವಿಚಾರಣೆ ಪ್ರಾರಂಭವಾಗುವ ಮೊದಲೇ, ಗೃಹ ಮಂತ್ರಿಗಳಿಂದ ಉತ್ತಮ ಮುಖ್ಯ ಮಂತ್ರಿ ಎಂಬ ಬಿರುದು ಪಡೆದ ಮುಖ್ಯ ಮಂತ್ರಿಯು ಘಟನೆ ನಡೆದ ಸ್ಥಳಕ್ಕೆ ಧಾವಿಸಿದ ಕೆಲವೇ ಕ್ಷಣಗಳಲ್ಲಿ ಇದೊಂದು ಅಂತರರಾಷ್ಟ್ರೀಯ ಭಯೋತ್ಪಾದಕರ ಕೆಲಸ, ಐ.ಎಸ್.ಐ. ಕೈವಾಡವಿದೆ, ಬಿನ್ ಲ್ಯಾಡನ್‌ಗೆ ಸಂಬಂಧವಿದೆ ಇತ್ಯಾದಿ ಹೇಳಿಕೆ ನೀಡಿಬಿಟ್ಟರು. ಒರಿಸ್ಸಾದಲ್ಲಿ ಗ್ರಾಹಂ ಸ್ಟೈನ್ ಮತ್ತವರ ಮಕ್ಕಳನ್ನು ಜೀವಂತವಾಗಿ ಸುಟ್ಟು ಹಾಕಿದ ಘಟನೆಯನ್ನು ಅಂತರರಾಷ್ಟ್ರೀಯ ಚಿತಾವಣೆ ಎಂದ ಅಲ್ಲಿನ ಮುಖ್ಯ ಮಂತ್ರಿಗೂ ಗೃಹ ಮಂತ್ರಿಗಳು ಭೇಷ್ ಎಂದು ಬಿರುದು ನೀಡಿದ್ದಲ್ಲದೆ ಭಜರಂಗದಳದವರನ್ನು ತಾವು ಬಲ್ಲೆವೆಂದು, ಅವರು ಅಂತಹ ಕೃತ್ಯವೆಸಗಲು ಸಾಧ್ಯವೇ ಇಲ್ಲವೆಂದು ಹೇಳಿದರು.

ಸಾಮಾನ್ಯವಾಗಿ ಯಾವ ಕೋಮುಗಲಭೆಯಲ್ಲಾಗಲೀ ಬಲಿಯಾಗುತ್ತಿದ್ದವರು ಬಡವರು. ಆದರೆ ಈಗಿನ ಕೋಮು ಗಲಭೆಯಲ್ಲಿ ಈ ನಿಯಮವನ್ನು ಮುರಿಯಲಾಗಿದೆ. ಎರಡೂ ಕೋಮಿನವರು ಹೋಗುತ್ತಿದ್ದ ಪೂಜಾ ಸ್ಥಳಗಳನ್ನು ವಿಶೇಷವಾಗಿ ಮದ್ರಾಸಗಳನ್ನು (ಸುಮಾರು 358) ನಾಶಪಡಿಸಲಾಗಿದೆ. ಗುಜರಾತಿನ ಹಿಂಸೆ ಹಿಂದುತ್ವದ ಪುನರುತ್ಥಾನವಾಗಿದೆ. ಗುಜರಾತಿನ ಹಿಂಸೆಯ ವಿಶಿಷ್ಟತೆ ಏನೆಂದರೆ ಈ ಹಿಂಸೆಯನ್ನು ಯೋಜಿಸಿ ಕಾರ್ಯಗತಗೊಳಿಸಿದವರೆಲ್ಲರೂ (ಕಾರ್ಯಕರ್ತರಿಂದ ಹಿಡಿದು ಮುಖ್ಯ ಮಂತ್ರಿಯ ವರೆಗೂ) ಆರ್.ಎಸ್.ಎಸ್. ನಲ್ಲಿ ತರಬೇತಿಗೊಂಡವರು. ಈ ಹಿಂಸಾಕಾಂಡವು ಕೋಮುವಾದಿ ರಾಜಕಾರಣದ ಅಂಶ. ಧಾರ್ಮಿಕ ಕೋಮುವಾದದ ಏಕರೂಪಿ ಆಸಕ್ತಿಯೇ ಕೋಮುವಾದಿ ರಾಜಕಾರಣದ ಅಡಿಪಾಯ.

## ಕೋಮುವಾದಿ ರಾಜಕಾರಣದ ಪ್ರಾರಂಭ :

ಪಾಳೆಗಾರಿಕೆ ವ್ಯವಸ್ಥೆ ಇಳಿಮುಖವಾಗಿ ಕೈಗಾರಿಕಾ ಸಂಸ್ಕೃತಿ ಜಾರಿಗೊಳ್ಳುತ್ತಿದ್ದು ಅದು ಮಧ್ಯಮವರ್ಗವನ್ನು ಸೃಷ್ಟಿಸಿತ್ತು. ಸ್ಥಳೀಯ ಕೈಗಾರಿಕೋದ್ಯಮ ವರ್ಗ ತಮ್ಮ ಆಧುನಿಕ ಶಿಕ್ಷಣದ ಹಿನ್ನಲೆಯೊಂದಿಗೆ ಇಂಡಿಯನ್ ನ್ಯಾಶನಲ್ ಕಾಂಗ್ರೆಸ್ ಪಕ್ಷ ಕಟ್ಟಿದರು. ಸ್ಥಳೀಯ ಕೈಗಾರಿಕೋದ್ಯಮಿಗಳನ್ನು, ಸ್ಥಳೀಯ ಶಿಕ್ಷಿತ ಜನರನ್ನು ಪ್ರೋತ್ಸಾಹಿಸುವುದು ಜಾರಿಗೊಂಡಿತು. ಇದಕ್ಕೆ ಪ್ರತಿಯಾಗಿ ಯುನೈಟೆಡ್ ಇಂಡಿಯಾ ಪೆಟ್ರಿಯೊಟಿಕ್ ಅಸೋಸಿಯೇಷನ್ ಹುಟ್ಟಿಕೊಂಡಿತು. ಈ ಸಂಘ ರಾಜರು, ನವಾಬರುಗಳನ್ನೊಳಗೊಂಡಿತ್ತು. ಈ ಸಂಘವು ಆಳುವ ಅರಸರಿಂದ ಏನನ್ನಾದರೂ ಒತ್ತಾಯಿಸುವುದು ಅಪರಾಧವೆಂಬ ಮೌಲ್ಯವನ್ನು ಎತ್ತಿ ಹಿಡಿಯುವಂತಹುದಾಗಿತ್ತು. ಬ್ರಿಟಿಷರ ಒಡೆದು ಆಳುವ ನೀತಿಯಿಂದಾಗಿ ರಾಷ್ಟ್ರ ಭಕ್ತರ ಸಂಘವು ಒಡೆದು ಹಿಂದೂ ಮಹಾಸಭ ಮತ್ತು ಮುಸ್ಲಿಂಲೀಗ್ ಹುಟ್ಟಿಕೊಂಡವು. ಹಿಂದೂ ಮಹಾಸಭಾದವರು ತಮಗೆ 5000 ವರ್ಷದ ಇತಿಹಾಸವಿದೆಯೆಂದು ಮುಸ್ಲಿಂರ ಇತಿಹಾಸ ಇತ್ತೀಚಿನದೆಂಬ ವಾದ ಪ್ರಾರಂಭಿಸಿದರು. ಆದರೆ ಇವರಿಬ್ಬರೂ ಆಳರಸರ

ವರ್ಗದವರೆಂಬ ಸತ್ಯ ಮರೆಯಾಯಿತು.

ಇದರೊಟ್ಟಿಗೆ ದಮನಿತ ಜನರು ಸಂಘಟಿತರಾಗುತ್ತಿದ್ದ ಪ್ರಕ್ರಿಯೆಯೂ ನಡೆಯುತ್ತಿತ್ತು. ಅಂಬೇಡ್ಕರ್, ಜ್ಯೋತಿ ಬಾ ಫುಲೆಯಂತಹವರ ಪ್ರಯತ್ನಗಳು ದಮನಿತ ಲಿಂಗ, ಜಾತಿಗಳ ನಡುವೆ ಬದಲಾವಣೆಯನ್ನುಂಟುಮಾಡಿತ್ತು. ಹೀಗೆ ಭಾರತ ಒಂದು ರಾಷ್ಟ್ರವಾಗಿ ರೂಪ ಪಡೆಯುವ ಪ್ರಕ್ರಿಯೆಯಲ್ಲಿ ಮೂರು ಮುಖ್ಯ ಅಂಶಗಳನ್ನು ನಾವು ಗಮನಿಸಬೇಕು.

1. ಹೊಸ ಮಧ್ಯಮವರ್ಗವೊಂದು ರೂಪಗೊಂಡಿದ್ದು.

2. ಬ್ರಿಟಿಷರ ವಿರುದ್ಧ ಹುಟ್ಟಿಕೊಂಡ ಪ್ರತಿಭಟನೆ.

3. ದಮನಿತರಲ್ಲಿ ಬದಲಾವಣೆಯ ಪ್ರಕ್ರಿಯೆ.

ದೇಶ ವಿಭಜನೆಗೊಂಡಿದ್ದು ದೇಶದ ರಾಜಕೀಯದ ಮೇಲೆ ಪರಿಣಾಮ ಬೀರಿತು. ಇಲ್ಲಿನ, ಸಂಬಳ ಪಡೆಯುವ ಮುಸ್ಲಿಂ ವರ್ಗವೂ ಮಹತ್ವಾಕಾಂಕ್ಷೆಯಿಂದ ಪಾಕಿಸ್ತಾನಕ್ಕೆ ಹೋದರೂ ಅಲ್ಲಿ ಹೆಚ್ಚೆಚ್ಚು ಅಭದ್ರತೆಗೊಳಪಟ್ಟರು. ತಮ್ಮ ಹಕ್ಕುಗಳಿಗಾಗಿ ಮಹಜೀರ್ ಸಂಘ ಮಾಡಿಕೊಂಡರು. ಧರ್ಮದ ಆಧಾರದ ಮೇಲೆ ದೇಶ ರಚನೆಯಾದರೂ ಒಂದೇ ಧರ್ಮದಲ್ಲಿನ ಆರ್ಥಿಕ ಮತ್ತು ಸಾಂಸ್ಕೃತಿಕ ಭಿನ್ನತೆಗಳೂ ಮುಖ್ಯ ಪಾತ್ರವಹಿಸುತ್ತವೆ ಎಂಬುದಕ್ಕೆ ಬಂಗ್ಲಾದೇಶ ವಿಭಜನೆಯೇ ಸಾಕ್ಷಿ.

ನಾವು ಗಮನಿಸಬೇಕಾದ ಮುಖ್ಯ ಅಂಶವೆಂದರೆ ಹಿಂದೂಗಳ ಪ್ರತಿನಿಧಿಗಳೆಂದುಕೊಳ್ಳುವವರು ಶೇ 24ಕ್ಕಿಂತ ಹೆಚ್ಚಿನ ಮತ ಪಡೆದಿಲ್ಲ. ಒಟ್ಟು ಮುಸ್ಲಿಂ ಸಮುದಾಯದಲ್ಲಿ ಶೇ. 3.6 ಕ್ಕಿಂತ ಹೆಚ್ಚು ಮತ ಮುಸ್ಲಿಲೀಗ್‌ಗೆ ಸಿಕ್ಕಿಲ್ಲ.

ಹಿಂದೂ ಧರ್ಮಕ್ಕೆ ಸಾವಿರಾರು ವರ್ಷಗಳ ಇತಿಹಾಸವಿದೆ ಎನ್ನುತ್ತಾರೆ. ಆದರೆ ಹಿಂದು ಎಂಬ ಪದ ಕ್ರಿ.ಪೂ 6ರ ಮುಂಚಿನ ಯಾವ ಪವಿತ್ರ ಗ್ರಂಥಗಳಲ್ಲೂ ಇಲ್ಲ. ಹಿಂದು ಎಂಬ ಪದ ಅರಬರಿಂದ ಪ್ರಾರಂಭವಾಯಿತು. ಅವರು ಸಿಂಧು ಎಂದು ಉಚ್ಚರಿಸಲು ಬರದಿದ್ದುದರಿಂದ ಹಿಂದೂ ಎಂದು ಕರೆದರು.

ಮೂಲಾರ್ಥದಲ್ಲಿ ನಮ್ಮ ಸಂಸ್ಕೃತಿಯನ್ನು ವೈದಿಕ ಮತ್ತು ಶ್ರವಣಿಕ ಸಂಸ್ಕೃತಿ ಎಂದು ವಿಭಜಿಸಬಹುದು. ಶ್ರವಣರು ಶ್ರೇಣೀಕೃತ ಜಾತಿ ವ್ಯವಸ್ಥೆಯನ್ನು ವಿರೋಧಿಸಿದರು. ಹಿಂದುತ್ವ ಎಂಬ ಪರಿಕಲ್ಪನೆ ಹುಟ್ಟಿಕೊಂಡಿದ್ದು 20 ನೇ ಶತಮಾನದಲ್ಲಿ ಸಾವರ್ಕರ್ ರವರಿಂದ, ಬ್ರಿಟಿಷ್ ಸರ್ಕಾರದ ವಿರುದ್ಧ ಯಾವ ಚಟುವಟಿಕೆ ನಡೆಸುವುದಿಲ್ಲವೆಂದು ಹೇಳಿ ಜೈಲಿನಿಂದ ಹೊರಬಂದ ಸಾರ್ವಕರ್ ಹಿಂದುತ್ವದ ಕುರಿತು ಬರೆದರು. ಹಿಂದೂ ಭೂಮಿಯನ್ನು ಪವಿತ್ರ ನೆಲ ಮತ್ತು ತಂದೆ ನಾಡೆಂದು ತಮ್ಮ ಪುಸ್ತಕದಲ್ಲಿ ಬರೆದರು. ನಾಜಿಗಳು, ಫ್ಯಾಸಿಸ್ಟರು ಮಾತ್ರ ತಮ್ಮ ನಾಡನ್ನು ತಂದೆ ನಾಡೆಂದು ಕರೆಯುತ್ತಿದ್ದುದು. ಸಾರ್ವರ್ಕರ್ ಪ್ರತಿಪಾದಿಸಿದ ಹಿಂದುತ್ವ ಬರೀ ಧರ್ಮವನ್ನು ಕುರಿತು ಹೇಳುವುದಿಲ್ಲ. ಸಾರ್ವರ್ಕರ್ ಹುಟ್ಟುಹಾಕಿದ ರಾಷ್ಟ್ರೀಯ ಸ್ವಯಂ ಸೇವಾ ಸಂಘ ನಾಗಪುರದಲ್ಲಿ ಭೋನಸ್ಲೆ ಆಡಳಿತಾವಧಿಯಲ್ಲಿ ಪ್ರಾರಂಭವಾಯಿತು. ನಾಗಪುರದಲ್ಲಿ ಪ್ರಾರಂಭಿಸುವುದರ ಹಿಂದೆ ಒಂದು ಉದ್ದೇಶವಿತ್ತು. ನಾಗಪುರ, ವಿದರ್ಭ ಇತ್ಯಾದಿ ಪ್ರದೇಶಗಳಲ್ಲಿ ಬ್ರಾಹ್ಮಣ ವಿರೋಧಿ ಚಳುವಳಿ ಗಟ್ಟಿಯಾಗಿತ್ತು. ಭಾರತ ರಾಷ್ಟ್ರೀಯ ಕಾಂಗ್ರೆಸ್ ಒಂದು ಚಳುವಳಿಯಾಗಿ ರೂಪಗೊಂಡಿತ್ತು. ಬ್ರಾಹ್ಮಣ್ಯದ ಪ್ರಭುತ್ವ ಇಳಿಮುಖಗೊಂಡಿತ್ತು. ಹೀಗೆ ಬ್ರಾಹ್ಮಣ್ಯದ ಪ್ರಭುತ್ವವನ್ನು ಪುನರ್ ಸ್ಥಾಪಿಸಲು ಆರ್.ಎಸ್.ಎಸ್. ಪ್ರಾರಂಭವಾಯಿತು. ಅದಕ್ಕೆ ಯಾವುದೇ ಪ್ರಜಾಸತ್ತಾತ್ಮಕ ರಚನೆಗಳಿಲ್ಲ. ಮುಂದಿನ ಮುಖ್ಯಸ್ಥನಾರೆಂದು ಹಿಂದಿನ ಅಥವಾ ಸಾಯುತ್ತಿರುವ ಮುಖ್ಯಸ್ಥ ಹೆಸರು ಬರೆದು ಸೂಚಿಸುತ್ತಾರೆ.

ಆರ್.ಎಸ್.ಎಸ್,ನ ಎರಡನೇ ಮುಖ್ಯಸ್ಥರಾಗಿದ್ದ ಗೋಲ್ವಾಲ್ಕರ್ ''ಹೂ ಇಸ್ ಎ ಹಿಂದು'' ಎಂಬ ಪುಸ್ತಕ ಬರೆದರು. ಅದರಲ್ಲಿ ಹಿಂದುಗಳೆಂದರೆ ಭಾರತದಲ್ಲಿ ವಿವಾದರಹಿತ, ಪ್ರಶ್ನಾತೀತ ಸ್ಥಾನವುಳ್ಳವರು. ಆರ್ಯರು ಹೊರಗಿನಿಂದ ಬಂದವರಲ್ಲ. ಇಲ್ಲಿಯ ಮೂಲ ನಿವಾಸಿಗಳೆಂದು ವಾದಿಸಲಾಯಿತು. ಬ್ರಿಟಿಷರು ಭಾರತಕ್ಕೆ ಬಂದಾಗ ಕೆಲವು ಹಿಂದೂಗಳು ಅವರನ್ನು ಸ್ವಾಗತಿಸಿದರು. ಎಷ್ಟೋ ವರ್ಷಗಳ ನಂತರ ಸಹೋದರರ ಪುನರ್ ಮಿಲನವೆಂದು ಸಂತೋಷಿಸಿದರು. (ಮಧ್ಯ ಏಶಿಯಾದಿಂದ ಆರ್ಯರು ಭಾರತಕ್ಕೆ, ಯುರೋಪಿಗೆ ವಲಸೆ ಹೋದರು. ಯುರೋಪಿಗೆ ಹೋದ ಆರ್ಯರು ಬ್ರಿಟಿಷರಾಗಿ ಭಾರತಕ್ಕೆ ಬಂದಾಗ ಸಹಜವಾಗಿ ಇಲ್ಲಿನ ಆರ್ಯರಿಗೆ ಸಂತೋಷವಾಗಿರಬೇಕು!)

ಗೋಲ್ವಾಲ್ಕರ್ ಅವರು ತಮ್ಮ ''ಬಂಚ್ ಆಫ್ ಥಾಟ್ಸ್'' ಪುಸ್ತಕದಲ್ಲಿ ಮನುವನ್ನು ಬಹುದೊಡ್ಡ ನ್ಯಾಯರಚನಕಾರನೆಂದು ಕರೆದಿದ್ದಾರೆ. ಇದು ಹಿಂದು ರಾಷ್ಟ್ರವೆಂದು ಈ ರಾಷ್ಟ್ರಕ್ಕೆ ಮುಸ್ಲಿಂರಿಂದ, ಕ್ರಿಶ್ಚಿಯನ್‌ರಿಂದ, ಮಾರ್ಕ್ಸ್‌ವಾದಿಗಳಿಂದ ಬೆದರಿಕೆ ಇದೆ ಎಂದು ಹೇಳುತ್ತಾರೆ. ಹೀಗೆ ಆರ್.ಎಸ್.ಎಸ್. ಸಿದ್ಧಾಂತದ ಅಡಿಪಾಯ ಸದ್ದಿಲ್ಲದೆ ರೂಪುಗೊಂಡಿತು. 1952ರಲ್ಲಿ ಆರ್.ಎಸ್.ಎಸ್ ಭಾರತೀಯ ಜನಸಂಘವನ್ನು ಪ್ರಾರಂಭಿಸಿತು. ಆರ್.ಎಸ್.ಎಸ್. ನಂತಹ ಸಂಘಟನೆಗಳು ಮಹಿಳಾ ಸಮಾನತೆಯ ವಿರೋಧಿಗಳೆಂಬುದಕ್ಕೆ

*ಉದಾಹರಣೆಯಾಗಿ ಈ ಘಟನೆಯನ್ನು ತೆಗೆದುಕೊಳ್ಳಬಹುದು. 1936 ರಲ್ಲಿ ಮತಿಬಾಯಿ ಕೇಳ್ಕರ್ ಹೆಗ್ಡೆವಾರರಿಗೊಂದು* ಪತ್ರ ಬರೆದು ರಾಷ್ಟ್ರ ನಿರ್ಮಾಣದಲ್ಲಿ ಮಹಿಳೆಯರಿಗೂ ಅವಕಾಶ ಕೊಡಬೇಕೆಂದು ಕೇಳಿದರು. ಬಹಳ ಯೋಚಿಸಿದ ನಂತರ ಹೆಗ್ಡೆವಾರರು ಮಹಿಳೆಯರು ಪ್ರತ್ಯೇಕವಾಗಿ ರಾಷ್ಟ್ರಸೇವಿಕಾ ಸಂಘ ಪ್ರಾರಂಭಿಸಬಹುದೆಂದು ಸೂಚಿಸಿದರು. ಪುರುಷರದು ರಾಷ್ಟ್ರೀಯ ಸ್ವಯಂ ಸೇವಕ ಸಂಘ, ಪುರುಷರು ಸ್ವಯಂ ಪ್ರೇರಣೆಯಿಂದ ಬಂದವರು, ಮಹಿಳೆಯರು ರಾಷ್ಟ್ರ ಸೇವಿಕೆಯರು. ಸ್ವಯಂಪ್ರೇರಣೆಯಿಂದಲ್ಲ ಅನುಮತಿ ಪಡೆದು ಸೇವೆಗೆ ನಿಂತವರು. ಸ್ವಾತಂತ್ರ್ಯ, ಸಮಾನತೆ ಎಂಬಂತಹ ಮೌಲ್ಯಗಳನ್ನಾಧಿರಸದೆ, ದ್ವೇಷ, ಅಸಮಾನತೆಯಂತಹ ಇತ್ಯಾತ್ಮಕ ಅಂಶಗಳನ್ನಾಧರಿಸಿ ಹಿಂದುತ್ವ ರೂಪುಗೊಂಡಿತು. ಈ ಇತ್ಯಾತ್ಮಕ ಅಂಶಗಳು ನಮ್ಮ ಸಾಮಾಜಿಕ ಮನಸ್ಸಿನ ಭಾಗವಾಗಿಬಿಟ್ಟವೆ. ರಾಮಮಂದಿರ ವಿವಾದವೆ ಹಿಂದುತ್ವ ರಾಜಕಾರಣದ ಬಂಡವಾಳವಾಯಿತು. ತಮಾಷೆ ಎಂದರೆ ಆನಂದ ಪಟವರ್ಧನ್‌ರವರು ತಮ್ಮ ರಾಮ್‌ಕೆ ನಾಮ್ ಸಿನಿಮಾಕ್ಕೆ ಸಂಬಂಧಪಟ್ಟಂತೆ ಆಯೋಧ್ಯೆಯಲ್ಲಿ 49 ಬೇರೆ ಬೇರೆ ದೇವಸ್ಥಾನದ ಪೂಜಾರಿಗಳನ್ನು ಸಂದರ್ಶಿಸಿದಾಗ ಪ್ರತಿಯೊಬ್ಬ ಪೂಜಾರಿಯು ತಮ್ಮ ದೇವಸ್ಥಾನವೇ ನಿಜವಾದ ರಾಮಜನ್ಮಸ್ಥಾನವೆಂದು ಹೇಳಿದ್ದರು.

ಇದೇ ಹಿಂದುತ್ವವಾದಿಗಳ ಕೋಮುವಾದಿ ರಾಜಕಾರಣಕ್ಕೆ ಗುಜರಾತ್ ಒಂದು ಪ್ರಯೋಗಾಲಯವಾಗಿದೆ. 1980ರಲ್ಲಿ ಗುಜರಾತಿನಲ್ಲಿ ನಡೆದು ಗಲಭೆ ದಲಿತರ ವಿರೋಧಿಸಿ ನಡೆದದ್ದು. 1985 ರಿಂದಲೂ ರಾಮಮಂದಿರವಿಲ್ಲದೆ ನಮ್ಮ ಆಧ್ಯಾತ್ಮಿಕ ಆಸಕ್ತಿಗಳು ಸಂತೃಪ್ತಿ ಹೊಂದವು ಎಂಬ ಭಾವನೆಯನ್ನು ನಿರಂತರವಾಗಿ ಬಿತ್ತುತ್ತ ಬಂದರು. ಶ್ರೀಮಂತ ರೈತರು, ಶ್ರೀಮಂತ ವರ್ಗಗಳು, ಕೈಗಾರಿಕೋದ್ಯಮಿಗಳ ಬೆಂಬಲ ಪಡೆಯುತ್ತಾ ಅಲ್ಪಸಂಖ್ಯಾತರನ್ನು ರಾಕ್ಷಸರೆಂಬಂತೆ ಚಿತ್ರಿಸುತ್ತಾ ಬಂದರು. ಗಲಭೆ, ಹತ್ಯೆ, ಆಸ್ತಿ ನಷ್ಟ ಮಾಡುವ ಮೂಲಕ ಅವರಲ್ಲಿ ಅಭದ್ರತೆ ಮೂಡಿಸಿ ಅವರು ಹೆಚ್ಚೆಚ್ಚು ಕಠಿಣರಾಗುವಂತೆ ಮಾಡುವುದೇ ಕೋಮುವಾದ ರಾಜಕಾರಣದ ಉದ್ದೇಶ. ಅಭದ್ರತೆ ಹೆಚ್ಚಿದಂತೆ ಕಠಿಣರಾಗುತ್ತ ಹೋಗಿ ಹಿಂಸೆ ಹೆಚ್ಚಾಗುತ್ತದೆ. ಮುಂಬೈನಲ್ಲಿ ಕೋಮುವಾದದ ವಿರುದ್ಧ ಕೆಲಸ ಮಾಡುತ್ತಿದ್ದ ಮಹಿಳಾ ಸಂಘಟನೆ "ಆವಾಜ್ ಎ ನಿಸ್ವಾನ್" ಕಾರ್ಯಕರ್ತರು ಸಮುದಾಯದೊಳಗೆ ತಮ್ಮ ಕೆಲಸಕ್ಕೆ ಪ್ರತಿರೋಧವಿರುವುದನ್ನು ಹೇಳಿದ್ದರು. ಈ ಸಂಘಟನೆಯು ಬುರ್ಖಾ, ಬಹು ಪತ್ನಿತ್ವ, ತಲಾಖ್ ವಿರುದ್ಧ ನಿರಂತರವಾಗಿ ಹೋರಾಡುತ್ತಾ ಬಂದಿದೆ.

ಕೋಮುವಾದಿ ರಾಜಕಾರಣಕ್ಕೆ ಹಿಂಸೆಯೇ ಆಹಾರ, ಹಿಂಸೆ ಹುಟ್ಟಿಹಾಕಲು ಗುಮಾನಿ ಹಬ್ಬಿಸುವುದರಲ್ಲಿ ನಿಸ್ಸೀಮರು. ಪುಣೆಯ ಪಾಸ್ವಾಡದಲ್ಲಿ ನಡೆದ ಗಲಭೆಗೆ ಮೂಲ ಗುಮಾನಿ ಮುಸ್ಲಿಂನೊಬ್ಬ ಮನೆ ಕಟ್ಟಿದ, ಆ ಮನೆಗೊಂದು ಬೇಸ್‌ಮೆಂಟ್ ಇದೆ, ಆ ಬೇಸ್‌ಮೆಂಟ್‌ನಲ್ಲಿ ಶಸ್ತ್ರಾಸ್ತ್ರ ಸಂಗ್ರಹಿಸುತ್ತಿದ್ದಾನೆ, ಯಾಕೆಂದರೆ ದೇವಸ್ಥಾನದ ಮೇಲೆ ದಾಳಿ ಮಾಡಿಸಲು, ಈ ದಾಳಿಗೆ ಬಿನ್‌ಲಾಡನ್ ಬೆಂಬಲವಿದೆ, ಅವನು ಇಲ್ಲಿಗೆ ಬರುತ್ತಾನಂತೆ, ಹೀಗೆ ಈ ಅಂತೆ ಕಂತೆಗಳೆ ಅಂತಿಮವಾಗಿ ಹಿಂಸೆಯ ರೂಪ ಪಡೆಯಿತು.

ಗುಜರಾತ್ ಹಿಂಸಾಕಾಂಡ ಕುರಿತಂತೆ ಮಧ್ಯಮವರ್ಗ ವ್ಯಕ್ತಪಡಿಸಿದ 'ಅವರಿಗೆ ತಕ್ಕ ಶಾಸ್ತಿಯಾಯಿತು' ಎಂಬ ಪ್ರತಿಕ್ರಿಯೆ ಆಘಾತಕಾರಿಯಾದುದು. ನಮ್ಮಂತಹ ಅರೆ ಜಾತ್ಯಾತೀತ ಸಮಾಜದಲ್ಲಿ ಕೋಮುವಾದವನ್ನು ಗಂಭೀರವಾಗಿ ಪರಿಗಣಿಸುವ ಅಗತ್ಯವಿದೆ. ಪ್ರಜಾಸತ್ತಾತ್ಮಕ ಸಮಾಜದ ನಿರ್ಮಾಣ ತುಂಬಾ ಮುಖ್ಯ. ಪ್ರಜಾಸತ್ತಾತ್ಮಕತೆ ಮತ್ತು ಜಾತ್ಯಾತೀತತೆ ಬೇರೆ ಬೇರೆಯಲ್ಲ. ಸರಿಯಾದ ಸಮಯದಲ್ಲಿ ಕೋಮುವಾದವನ್ನು ಎದುರಿಸದಿದ್ದರೆ ಪರಿಣಾಮ ಅಪಾಯಕಾರಿ. ಕೋಮುವಾದಿ ಪಕ್ಷಗಳು ತಾವೆ ಸ್ವತಹ ಅಥವಾ ಇತರ ಪಕ್ಷಗಳೊಂದಿಗಿನ ಮೈತ್ರಿಯಿಂದ ಅಧಿಕಾರಕ್ಕೆ ಬರುವುದು ಅಪಾಯಕಾರಿ. ಅಧಿಕಾರಕ್ಕೆ ಬಂದ ಕೂಡಲೆ ತಮ್ಮ ಅಜೆಂಡಾಗಳನ್ನು ಜೀವಂತವಾಗಿಡಲು ಸಾಕಷ್ಟು ರಚನೆಗಳು ಅವರಿಗೆ ಸಿಕ್ಕಿ ಬಿಡುತ್ತವೆ.

ಕೋಮುವಾದ ವಿರುದ್ಧದ ಹೋರಾಟವು ಹಲವು ಲೇಯರ್‌ಗಳನ್ನೊಳಗೊಂಡ ಹೋರಾಟ. ಹಳೆಯ ಮಿಥ್ಯೆಗಳಿಗೆ ಹೊಸ ಜೀವ ಕೊಡುವ ಮೂಲಕ ದ್ವೇಷ ಭಾವನೆಯನ್ನು ಮಾನಸಿಕ ಸ್ಥಿತಿಯಾಗಿಸುವುದರಿಂದಲೆ ಅಮಾನುಷವಾದ ಕ್ರೌರ್ಯವೂ ಸಮರ್ಥಿಸಲ್ಪಡುತ್ತದೆ.

ಹಿಂದಿ ಪದ್ಯವೊಂದನ್ನು ಹೇಳಿ ರಾಮ್‌ರವರು ತಮ್ಮ ಮಾತು ಮುಗಿಸಿದರು.

ಅಲ್ಪಸಂಖ್ಯಾತರ ಹತ್ಯೆಯಾಗಿ
ನೆತ್ತರ ಮಳೆಯಾಯಿತು
ಮುಂದಿನವರ್ಷ ಓಟಿನ ಒಳ್ಳೆಯ
ಫಸಲು ಸಿಗಬಹುದು

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 50 ರೂ**

**ಸಂಸ್ಥೆಗಳಿಗೆ : 100 ರೂ**

ಸಂ. ಮಂಡಳಿ

REGD No. : CPMG/KA/BGE/289/2002

BOOK - POST
PRINTED MATTER

ವಿಳಾಸ:
ಮಾನಸ
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067